# ಪಂಡಿತರಾಜ ಜಗನ್ನಾಥ

ಕೇಶವ ರಂಗಭಟ್ಟ ಜೋಶಿ



ಪಂಡಿತರಾಜ ಜಗನ್ನಾಥ :
ಕೇಶವಶರ್ಮಾ ರಂಗಭಟ್ಟ ಜೋಶಿ, ಗಲಗಲಿ
ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

ಆರ್ಥಿಕ ನೆರವು : ಕರ್ನಾಟಕ ರಾಜ್ಯ ಸರಕಾರ

PANDITARAAJA JAGANNAATHA
Life Sketch of Jagannatha Pandit in Kannada by
Keshavasharma Rangabhatta Joshi, Galagali

Published in 1985 by
Siddhaling Pattanshetti
Secretary
Karnatak Vidyavardhak Sangha, Dharwad – 580 001



Pages : 48 Copies : 5000

Printed at
Lalita Mudranalaya, Market, Dharwad – 580 001

# ಮೊದಲ ಮಾತು

ಕ್ರಿ ಶ ೧೮೯೦ರಲ್ಲಿ ಸ್ಥಾಪಿತಗೊಂಡ ಕರ್ನಾಟಕ ವಿದ್ಯಾವರ್ಧಕ ಸಂಘವು ಕರ್ನಾಟಕದ ಅತ್ಯಂತ ಪ್ರಾಚೀನನಾಡ, ಸಾಹಿತ್ಯಕ, ಮತ್ತು ಸಾಂಸ್ಕೃತಿಕ ಜೀವನದಲ್ಲಿ ಕನ್ನಡದ ಜನನಾಡಿಯನ್ನು ಹಿಡಿದ ತುಂಬ ಮಹತ್ವದ ಸಂಸ್ಥೆಯಾಗಿದೆ ಕರ್ನಾಟಕದ ಅನೇಕ ಬರಹಗಾರರು ಕವಿಗಳು ಸಾಮಾಜಿಕ ಕಾರ್ಯಕರ್ತರು ಈ ಸಂಸ್ಥೆಯಿಂದ ಸ್ಫೂರ್ತಿ ಪಡೆದು, ಹೆಸರು ಪಡೆದು ನಾಡಿನ ತುಂಬ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ

ತನ್ನ ಹುಟ್ಟಿನಾರಭ್ಯದಿಂದ ಕರ್ನಾಟಕ ವಿದ್ಯಾವರ್ಧಕ ಸಂಘವು ಕನ್ನಡ ಭಾಷೆ ಹಾಗೂ ಸಾಹಿತ್ಯದ ಬೆಳವಣಿಗೆಗಾಗಿ ಅವಿರತವಾಗಿ ಶ್ರಮಿಸುತ್ತ ಬಂದಿದೆ ಹಲವಾರು ಬಗೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಧಾರವಾಡವನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಸಮಸ್ತ ಕರ್ನಾಟಕದ ಲೇಖಕರನ್ನು, ವಿಚಾರವಂತರನ್ನು ಒಂದುಗೂಡಿಸಿ ಬೆಳಕಿಗೆ ತರುವ ಕಾರ್ಯವನ್ನು ಸಂಘವು ಮೊದಲಿನಿಂದ ನಿಯಮಿತವಾಗಿ ಮಾಡುತ್ತ ಬಂದಿದೆ

ಕನ್ನಡ ಬರೆಹಗಾರರ ಬಳಗವನ್ನು ಕಟ್ಟಿ ಅವರಿಂದ ವಿವಿಧ ವಿಷಯಗಳನ್ನು ಕುರಿತು ಗ್ರಂಥಗಳನ್ನು ಬರೆಸಿ ಅಥವಾ ಸ್ಪರ್ಧೆಗಳನ್ನು ಏರ್ಪಡಿಸಿ ಗ್ರಂಥರಚನೆಗೆ ಪ್ರೋತ್ಸಾಹ ನೀಡಿ ತನ್ಮೂಲಕ ಮೂಡಿಬಂದ ಕೃತಿಗಳನ್ನು ತುಂಬ ಪರಿಶ್ರಮದಿಂದ ಪ್ರಕಟಿಸಿ ಅವುಗಳನ್ನು ನಾಡಿನ ತುಂಬ ಹರಡಿದ್ದ ಕನ್ನಡಾಭಿಮಾನಿಗಳಿಗೆ ತಲುಪಿಸುವ ಮಹತ್ವದ ಚಾರಿತ್ರಿಕ ಹೊಣೆಗಾರಿಕೆಯನ್ನು ಸಹ ಸಂಘವು ನಿರ್ವಹಿಸಿಕೊಂಡು ಬಂದಿದೆ

ಈ ನಿಟ್ಟಿನಲ್ಲಿ ಸಂಘವು ಸಾಹಿತ್ಯಿಕ ಜಗತ್ತಿನಲ್ಲಿ ಬಹುಕಾಲ ಉಳಿಯುವಂಥ ನೂರಾರು ಪುಸ್ತಕಗಳನ್ನು ಪ್ರಕಟಿಸಿದ್ದು ಅವು ಸಂಘದ ಚರಿತ್ರೆಯಲ್ಲಿ ಉಳಿಯುವಂಥ ಕೃತಿಗಳು ಈಚೆಗೆ ಕೆಲವು ವರ್ಷಗಳಿಂದ ಸಂಘದ ಪ್ರಕಾಶನ ವಿಭಾಗವು ನಾಡಿನಲ್ಲಿ ಬೆಳೆದು ಬಂದ ಪ್ರಕಾಶನದ ಪ್ರಸಾರದೊಂದಿಗೆ ಸ್ಪರ್ಧಾತ್ಮಕವಾಗಿ ಹೊಂದಿಕೊಂಡು ಹೋಗಲಾಗದೆ ಪುಸ್ತಕ ಪ್ರಕಟಣೆಯ ತನ್ನ ಕಾರ್ಯವನ್ನು ಸ್ಥಗಿತಗೊಳಿಸಿತು

ಈಗ ಅನತಿ ಕಾಲದಲ್ಲಿಯೇ ತನ್ನ ಆಯುಷ್ಯದ ನೂರನೆಯ ವರ್ಧಂತಿ ಉತ್ಸವವನ್ನು ಸಂಘವು ಆಚರಿಸಲಿರುವ ಸಂದರ್ಭದಲ್ಲಿ ಪೂರ್ವಭಾವಿಯಾಗಿ ತನ್ನ ಪ್ರಾಚೀನ ಗೌರವವನ್ನು ಮೆರೆದ ಕೆಲವಾರು ಕೃತಿಗಳನ್ನು ಆಯ್ದುಕೊಂಡು ಅವುಗಳ ಮರುಮುದ್ರಣದ ಯೋಜನೆಯನ್ನು ಹಾಕಿಕೊಂಡಿತು. ಹಿಂದೆ ಸಂಘವು ಪ್ರಕಟಿಸಿದ ಅನೇಕ ಪುಸ್ತಕಗಳು ಇಂದು ಕಾಲಗರ್ಭದಲ್ಲಿ ಸೇರಿಹೋಗಿ ಅವುಗಳ ಪ್ರತಿಗಳು, ಕೆಲವು ಕೃತಿ

ಗಳ ಹೆಸರುಗಳು ಸಹ ಗೊತ್ತಿಲ್ಲದಂತೆ ಆಗಿಬಿಟ್ಟಿವೆ. ಸಂಘದ ಇಡೀ ಚರಿತ್ರೆಯನ್ನು ಒಟ್ಟುಗೂಡಿಸಿ ಮಹತ್ವದ ಸಂಶೋಧನ ಗ್ರಂಥವೊಂದನ್ನು ಜವಾಬ್ದಾರಿಯುತ ವಿದ್ವಾಂಸರೊಬ್ಬರಿಂದ ಬರೆಸಬೇಕೆಂಬ ವಿಚಾರ ಸಹ ಸಂಸ್ಥೆಗಿದೆ ಅದಕ್ಕೆ ಅನು ಕೂಲಕರವಾಗಿ ಸಹಾಯಕವಾಗುವಂಥ ಕಾರ್ಯವೆಂದು ಸದ್ಯ ಉಪಲಬ್ಧವಿದ್ದ ಕೃತಿಗಳಲ್ಲಿ ಹದಿನೈದು ಪುಸ್ತಕಗಳನ್ನು ಆಯ್ದು ಅವುಗಳ ಮರುಮುದ್ರಣದ ಯೋಜನೆಯೊಂದನ್ನು ಹಮ್ಮಿಕೊಂಡು ಅದರ ವಿವರವನ್ನು ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ೧೯೮೪ರ ಪೂರ್ವಾರ್ಧದಲ್ಲಿ ಸಲ್ಲಿಸಲಾಯಿತು ಆಗ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ನ ನಾ. ಕರಾವಿ ಅವರು ಕರ್ನಾಟಕ ವಿದ್ಯಾವರ್ಧಕ ಸಂಘದ ಬಗ್ಗೆ ತಾವು ಇಟ್ಟುಕೊಂಡಿದ್ದ ಅಭಿಮಾನವನ್ನು ಹೃತ್ಪೂರ್ವಕವಾಗಿ ನೆನೆದು ಸಂಘವು ಹಮ್ಮಿಕೊಂಡ ಈ ಯೋಜನೆಯನ್ನು ಯಶಸ್ವಿಗೊಳಿಸುವಲ್ಲಿ ಎಲ್ಲ ರೀತಿಯ ನೆರವು ನೀಡುವುದಾಗಿ ಆಶ್ವಾಸನೆ ಕೊಟ್ಟರು. ಅದರಂತೆ ಯೋಜನೆಯನ್ನು ಒಪ್ಪಿ ಸರಕಾರವು ಹದಿನೈದು ಪುಸ್ತಕಗಳ ಪ್ರಕಾಶನಕ್ಕಾಗಿ ಎರಡು ಲಕ್ಷ ರೂಪಾಯಿಗಳನ್ನು ಅನುದಾನ ವಾಗಿ ಕೊಡುವಂತೆ ವ್ಯವಸ್ಥೆ ಮಾಡಿದ ಮಾನ್ಯ ಶ್ರೀ ಕರಾವಿ ಅವರು ಸಂಘವು ಆ ಅನು ದಾನವನ್ನು ಸ್ವೀಕರಿಸುವ ಹೊತ್ತಿಗೆ ಭೌತಿಕವಾಗಿ ಇಲ್ಲವಾದದ್ದು ಸಂಘಕ್ಕೆ ಬಹಳ ದೊಡ್ಡ ನೋವು. ಹದಿನೈದು ಕೃತಿಗಳ ಪ್ರಕಾಶನದ ಈ ಸಂದರ್ಭದಲ್ಲಿ ಸಂಘವು ಅತ್ಯಂತ ಕೃತಜ್ಞತೆಯಿಂದ ಶ್ರೀ ಕರಾವಿ ಅವರನ್ನು ಸ್ಮರಿಸುತ್ತದೆ.

ಸಂಘವು ಮರುಮುದ್ರಣದ ಪ್ರಕಾಶನ ಯೋಜನೆಯ ಮೊದಲ ಹಂತವಾಗಿ ಆಯ್ದುಕೊಂಡ ಹದಿನೈದು ಕೃತಿಗಳು ಇವು .

೧) ಶೌರ್ಯಸಾಗರ
೨) ಕನ್ನಡಿಗರ ಜನ್ಮಸಾರ್ಥಕತೆ
೩) ನರಕಾಸುರ ವಿಜಯವ್ಯಾಯೋಗಂ
೪) ಕರ್ನಾಟಕ ಕಥಾಸರಿತ್ಸಾಗರ
೫) ಮೋಹಿನೀ ಅಥವಾ ನಿಂದಕರ ನಡವಳಿ
೬) ಕನ್ನಡ ಮಾತು ತಲೆಯೆತ್ತುವ ಬಗೆ
೭) ಕಾಲಿದಾಸ ಚರಿತ್ರ
೮) ಕರ್ಣಾಟಕ ಯಯಾತಿನಾಟಕಂ
೯) ಗೃಹವೈದ್ಯಕವು
೧೦) ಭಾರತೀಯ ವಿದುಷಿಯರು
೧೧) ಶ್ರೇಯಃಸಾಧನ
೧೨) ಪಂಡಿತರಾಜ ಜಗನ್ನಾಥ
೧೩) ಇಸೋಪನ ಚರಿತ್ರೆ

೧೪) ಶ್ರೀ ವಿದ್ಯಾರಣ್ಯ ಸ್ವಾಮಿಗಳು
೧೫) ನರಗುಂದದ ಬಂಡಾಯ

ಕ್ರಮವಾಗಿ ಪ್ರಕಟವಾಗುತ್ತಿರುವ ಈ ಕೃತಿಗಳು ಸಹ ವಿಷಯ ವೈವಿಧ್ಯ, ಆ ಕಾಲದ ಭಾಷಾ ಸೌಂದರ್ಯ, ವ್ಯಾಕರಣ ಹಾಗೂ ಭಾಷಾಶಾಸ್ತ್ರದ ದೃಷ್ಟಿಕೋನ ಹಾಗೂ ಬೆಳೆಯಬೇಕಾಗಿದ್ದ ಒಂದು ಭಾಷೆಯ ನಿರಂತರ ಪರಿಶ್ರಮದ ವಿಕಾಸಶೀಲ ಘಟ್ಟ ಮುಂತಾದ ದೃಷ್ಟಿಯಿಂದ ಪ್ರಮುಖ ಆಯಾಮಗಳನ್ನು ಹೊಂದಿರುವಂಥವು ಈ ಕೃತಿಗಳನ್ನು ಆಗ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕಾಗಿ ರಚಿಸಿಕೊಟ್ಟ ಆಯಾ ಲೇಖಕರು ತಮ್ಮ ಕೃತಿಗಳ ಸ್ವಾಮ್ಯವನ್ನು ಸಂಘಕ್ಕೆ ನೀಡಿದ್ದು ಈಗ ಈ ಕೃತಿಗಳ ಏಕಸ್ವಾಮ್ಯ ಹೊಂದಿದ ಸಂಘವು ಆ ಎಲ್ಲ ಲೇಖಕರನ್ನು ಕೃತಜ್ಞತೆಯಿಂದ ಸ್ಮರಿಸುತ್ತದೆ

ಈ ಕೃತಿಗಳಲ್ಲಿ ಯಾವುದೇ ಬದಲಾವಣೆ ಅಥವಾ ಹೊಸ ಸೇರ್ಪಡೆ ಇತ್ಯಾದಿ ಮಾಡದೆ ಅವು ಇದ್ದ ಮೂಲ ಸ್ಥಿತಿಯಲ್ಲಿಯೇ ಮರುಮುದ್ರಿಸಲಾಗಿದೆ ಐತಿಹಾಸಿಕ ದೃಷ್ಟಿಯಿಂದ ಈ ಕೃತಿಗಳನ್ನು ಅಭ್ಯಸಿಸುವವರಿಗೆ ಯಾವ ದೃಷ್ಟಿಯಿಂದಲೂ ವ್ಯತ್ಯಯ ಬರದ ಹಾಗೆ ಇವುಗಳ ಮೂಲ ಸ್ವರೂಪವನ್ನು ಉಳಿಸಿಕೊಳ್ಳಲಾಗಿದೆ. ಈಗ ಬೇರೆ ಎಲ್ಲಿಯೂ ಉಪಲಬ್ಧವಿರದ ಈ ವಿರಳ ಕೃತಿಗಳನ್ನು ಹೀಗೆ ಅವು ಇದ್ದ ಸ್ವರೂಪದಲ್ಲಿಯೇ ಉಪಲಬ್ಧಗೊಳಿಸಿ ಅವುಗಳ ಆಯುಷ್ಯ ಹಾಗೂ ಅಸ್ತಿತ್ವಗಳನ್ನು ಇನ್ನಷ್ಟು ಸುಭದ್ರ ಗೊಳಿಸುವ ನಿಟ್ಟಿನಲ್ಲಿ ಈ ಮರುಮುದ್ರಣಗಳು ಜನತೆಗೆ ಪ್ರಯೋಜನಕಾರಿಯಾದರೆ ಸಂಘದ ಶ್ರಮ ಸಾರ್ಥಕವಾದಂತೆ

ಈ ಕೃತಿಗಳನ್ನು ಪ್ರಕಟಿಸಲು ಆರ್ಥಿಕ ನೆರವು ನೀಡಿದ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ನಾವು ವಿಶೇಷವಾಗಿ ಕೃತಜ್ಞರಾಗಿದ್ದೇವೆ. ಈ ಹದಿನೈದು ಕೃತಿಗಳಲ್ಲದೆ ಕರ್ನಾಟಕ ವಿದ್ಯಾವರ್ಧಕ ಸಂಘದ ಇನ್ನಿತರ ಎಲ್ಲ ಕೃತಿಗಳನ್ನು ಹೀಗೆ ಮರುಮುದ್ರಣ ಮಾಡಿ ನಾಡಿನ ತುಂಬ ಅವು ವ್ಯಾಪಿಸುವಂತೆ ಮಾಡುವ ಉದ್ದೇಶ ನಮಗಿರುವುದರಿಂದ ಇನ್ನು ಮುಂದೆಯೂ ಕರ್ನಾಟಕ ಸರಕಾರ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ನಮ್ಮ ಈ ಬೃಹತ್ ಯೋಜನೆ ಯಶಸ್ವಿಯಾಗಿ ಮುಂದು ವರಿಯುವಂತೆ ನಮಗೆ ಆರ್ಥಿಕ ನೆರವನ್ನು ನೀಡಿ ಇಂಥ ಒಂದು ಐತಿಹಾಸಿಕ ಉಪ ಕ್ರಮದ ಮೂಲಕ ಪ್ರಕಾಶಿತಗೊಳ್ಳುವ ಕೃತಿಗಳ ಪುನರುಜ್ಜೀವನಕ್ಕೆ ಕಾರಣವಾಗಿ ನಮ್ಮ ಬೆನ್ನು ತಟ್ಟಲಿ ಎಂದು ಆಶಿಸುತ್ತೇವೆ.

'ಪಂಡಿತರಾಜ ಜಗನ್ನಾಥ' ಎಂಬ ಕೃತಿಯನ್ನು ರಚಿಸಿದವರು ಪಂಡಿತ ಕೇಶವ ಶರ್ಮಾ ರಂಗಭಟ್ಟ ಜೋಶಿ, ಗಲಗಲಿ. ಸಂಸ್ಕೃತ ವಾಙ್ಮಯದ ಆಧುನಿಕ ಪ್ರಸಾರ ಕಾಲದಲ್ಲಿ ಪ್ರಮುಖ ಪಾತ್ರವಹಿಸಿ ಸಂಸ್ಕೃತ ವಿದ್ಯಾರ್ಥಿಗಳನ್ನು, ಸಂಸ್ಕೃತ ಪ್ರೇಮಿ ಗಳನ್ನು ನಿರ್ಮಿಸಿದ ಶ್ರೇಯಸ್ಸು ಇವರಿಗಿದೆ. 'ಪಂಡಿತರಾಜ ಜಗನ್ನಾಥ' ಎಂಬುದನ್ನು

ಜನರ ಸಂಸ್ಕೃತ ಪ್ರೀತಿಯನ್ನು ವರ್ಧಿಸಲು ಮತ್ತು ಕನ್ನಡದಲ್ಲಿ ಆಗ ಇಂಥ ವಿದ್ವಾಂಸ ಮಹಾ ಕವಿಗಳ ಬಗ್ಗೆ ಪುಸ್ತಕಗಳ ಕೊರತೆ ಇದ್ದುದನ್ನು ನೀಗಲು ಪಂಡಿತ ಕೇಶವಶರ್ಮರು ನಿಷ್ಠೆಯಿಂದ ಬರೆದರು ಜುಲೈ ೧೯೧೭ರಲ್ಲಿ ಅವರು ಕರ್ನಾಟಕ ವಿದ್ಯಾವರ್ಧಕ ಸಂಘಕ್ಕಾಗಿ ರಚಿಸಿದ ಈ ಕೃತಿಯು ವಾಗ್ಭೂಷಣ ಗ್ರಂಥಮಾಲೆಯ ೭೦ನೆಯ ಪುಷ್ಪವಾಗಿ ಪ್ರಕಟವಾದಾಗ ಇದರ ಬೆಲೆ ನಾಲ್ಕು ಆಣೆ ಇತ್ತು

ಕರ್ನಾಟಕದ ಜನತೆ, ಸಾಹಿತ್ಯಾಸಕ್ತ ಸ್ನೇಹಿತರು, ಗ್ರಂಥಾಲಯಗಳ ಅಧಿಕಾರಿಗಳು ಪ್ರಾಚೀನ ಕೃತಿ ಸಂಗ್ರಾಹಕರು ಹೆಚ್ಚಿನ ಸಂಖ್ಯೆಯಲ್ಲಿ ಈ ಕೃತಿಗಳ ಪ್ರತಿಗಳನ್ನು ಕೊಂಡು ಆರ್ಥಿಕವಾಗಿ ಸಹಾಯ ಮಾಡಿದಾಗ ಇನ್ನುಳಿದ ಕೃತಿಗಳನ್ನು ಬೇಗನೆ ಬೆಳಕಿಗೆ ತರುವ ನಮ್ಮ ಯೋಜನೆ ಬಹು ಬೇಗನೆ ಕಾರ್ಯಗತಗೊಳ್ಳುವಲ್ಲಿ ಸಂದೇಹವಿಲ್ಲ

ಈ ಕೃತಿಯ ಪ್ರಕಟಣೆಗೆ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಸಹಾಯ ಸಲ್ಲಿಸಿದ ಎಲ್ಲ ಆತ್ಮೀಯರಿಗೆ ಹಾಗೂ ಮುದ್ರಣಾಲಯದ ಸಿಬ್ಬಂದಿಗೆ ಕೃತಜ್ಞತೆಗಳು

| | | |
|---|---|---|
| ೧–೮–೧೯೮೫ | **ಸಿದ್ಧಲಿಂಗ ಪಟ್ಟಣಶೆಟ್ಟಿ** | **ಪಾಟೀಲ ಪುಟ್ಟಪ್ಪ** |
| ಧಾರವಾಡ | ಪ್ರಧಾನ ಕಾರ್ಯದರ್ಶಿ | ಅಧ್ಯಕ್ಷರು |

# ಪ್ರಸ್ತಾವನೆ

ನಮ್ಮ ದೇಶಭಾಷೆಗಳಿಗೆಲ್ಲ ಆಧಾರವಾಗಿದ್ದ ಸಂಸ್ಕೃತ ಭಾಷಾಮಾತೆಯ ಸಂಗೋಪನವನ್ನು ಮಾಡುವದು ನಮ್ಮೆಲ್ಲರ ಆದ್ಯಕರ್ತವ್ಯವಷ್ಟೇ? ಯಾವ ಭಾಷಾಧೇನುವಿನ ಶಕ್ತಿವರ್ಧಕವೂ, ಬುದ್ಧಿವರ್ಧಕವೂ, ಉತ್ಸಾಹವರ್ಧಕವೂ ಆದ ದುಗ್ಧವನ್ನು ಕುಡಿದು ಅಖಿಲ ಭರತಖಂಡವು—ಏಕೆ ಅಖಿಲ ಭೂಮಂಡಲವೇ—ಹೃಷ್ಟವೂ ಪುಷ್ಟವೂ ಆಯಿತೋ, ಆ ಧೇನುವೀಗ ಹಳಿದಾಗಿ ಹೋಗಿದೆ ಅದಕ್ಕೆ ಹೊಟ್ಟೆತುಂಬ ಸಹ ಕೂಳ ಸಿಕ್ಕುವದಿಲ್ಲ ಅದಕ್ಕೆ ಜಠರಪೂರ್ತಿಯಾಗಿ ಅನ್ನವನಿಕ್ಕದಷ್ಟು ಭಾರತೀಯರಾದ ನಾವೀಗ ಕೃತಘ್ನರಾಗಿದ್ದೇವೆ ನಮ್ಮ ಭಾವೀ ಉನ್ನತಿಗೆ ದೇಶಭಾಷೆಗಳ ಊರ್ಜಿತಾವಸ್ಥೆಯೇ ಕಾರಣವೆಂದು ತಜ್ಞರ ಅಭಿಪ್ರಾಯ ಜ್ಞಾನಭಾಂಡಾರವಾದ ದೇವವಾಣಿಯನ್ನು ಸಂರಕ್ಷಿಸಿದರಷ್ಟೇ ತದಾಶ್ರಿತವಾದ ದೇಶಭಾಷೆಗಳ ಉನ್ನತಿಯಾಗುವದು, ಆ ಭಾಷೆಯ ಮಹಿಮೆಯು ಸಾಮಾನ್ಯ ಜನರಲ್ಲಿ ಕೂಡ ತಿಳಿಯಬೇಕಾದರೆ ದೇಶಭಾಷೆಗಳ ದ್ವಾರಾ ಸಂಸ್ಕೃತ ವಾಙ್ಮಯದ ನಿಸ್ಸೀಮ ಉಪಾಸಕರ ಚರಿತಗಳನ್ನು ತಿಳಿಯಪಡಿಸುವದೊಂದು ಸಾಧನವು ಯಾಕಂದರೆ— ಆ ಮಹಾಮಹಿಮರ ಚರಿತಗಳನ್ನು ಓದುವದರಿಂದ ತದುಪಾಸಿತವಾದ ವಾಙ್ಮಯದ ಅಭ್ಯಾಸದ ಕಡೆಗೆ ಜನರ ಪ್ರವೃತ್ತಿಯಾಗುವದು ಸಂಸ್ಕೃತವಾಙ್ಮಯದ ಹೆಚ್ಚು ಅಭ್ಯಾಸವಾದಷ್ಟು ನಮ್ಮ ಸಂಸ್ಕೃತಿಯು ಹೆಚ್ಚುವದೆಂದು ಆ ಭಾಷೆಯ ಮಹತಿಯನ್ನರಿತವರೆಲ್ಲರೂ ಒಪ್ಪಿಕೊಳ್ಳುವ ಮಾತಾಗಿರುವದು

ನಮ್ಮ ದೇಶಭಾಷೆಗಳೂ ಸಂಸ್ಕೃತದಿಂದಲೇ ಹುಟ್ಟಿ ಪರಿಷ್ಕೃತವಾಗಿವೆ ನಮ್ಮ ಕನ್ನಡಭಾಷೆಯು ದ್ರವಿಡಭಾಷೆಯಿಂದ ಹುಟ್ಟಿದರೂ ಪರಿಷ್ಕೃತವಾಗಿ ಗ್ರಂಥಸ್ಥವಾದದ್ದು ಸಂಸ್ಕೃತದ ಸಹಾಯದಿಂದಲೇ. ಇನ್ನು ಮುಂದಾದರೂ ಸಂಸ್ಕೃತದ ಸಹಾಯದಿಂದಲೇ ನಾವು ನಮ್ಮ ಕನ್ನಡಭಾಷೆಯ ಉನ್ನತಿಯನ್ನು ಹೆಚ್ಚಿಗೆ ಮಾಡಿಕೊಳ್ಳತಕ್ಕದ್ದಿರುವದು.

ಅಂದಮೇಲೆ ಕನ್ನಡವಾಣಿಯ ಪರಿಷ್ಕಾರಕ್ಕೂ ಸಂಸ್ಕೃತ ಸರಸ್ವತಿಯ ಮಹಿಮಾ ಪ್ರಸಾರಕ್ಕೂ ಒಂದು ಸಾಧನವಾದ ಸಂಸ್ಕೃತಭಾಷಾಸೇವಕರ ಚರಿತಲೇಖನದ ಕಾರ್ಯವನ್ನು ಪ್ರಸ್ತುತದಲ್ಲಿ ಈ ಲೇಖಕನು ಅಂಗೀಕರಿಸಿದ್ದಾನೆ. ವಂಗ ಮಹಾರಾಷ್ಟ್ರ ಮೊದಲಾದ ದೇಶಭಾಷೆಗಳಲ್ಲಿ ಇಂತಹ ಚರಿತ್ರಗ್ರಂಥಗಳು ಇವೆ ಕನ್ನಡದಲ್ಲಿ ಅವುಗಳ ನ್ಯೂನತೆಯು. ಆ ನ್ಯೂನತೆಯನ್ನು ಕೆಲಮಟ್ಟಿಗೆ ಹೋಗಲಾಡಿಸುವದೂ ಪ್ರಸ್ತುತ ಲೇಖಕನ ಉದ್ದೇಶವು

ಈ ಉದ್ದೇಶದ್ವಯದಿಂದ ಪ್ರೇರಿತನಾಗಿ 'ಪಂಡಿತರಾಜ ಜಗನ್ನಾಥರ' ಚರಿತವನ್ನು ಬರೆದಿರುವೆನು. ಪಂಡಿತರಾಜನೆಂದರೆ, ಸಾಮಾನ್ಯನಲ್ಲ ಇವನು ಶಾಸ್ತ್ರಜ್ಞನೂ ಉತ್ಕೃಷ್ಟ ಕವಿಯೂ ಆಗಿದ್ದಾನೆ. ಸಂಸ್ಕೃತಭಾಷೆಯನ್ನು ಟೊಂಕಕಟ್ಟಿಕೊಂಡು ನಿಂತು ಸೇವಿಸಿ

ಆದರ ಮಹತಿಯನ್ನು ಬೆಳಿಸಿದ ವೀರರಲ್ಲಿ ಇವನೊಬ್ಬನು ಈ ಚಿಕ್ಕ ಪುಸ್ತಕವನ್ನು ಬರೆಯುವಾಗ್ಗೆ ಮುಖ್ಯವಾಗಿ 'ಕೈ ಸಾ ವಿದ್ಯಾವಾಚಸ್ಪತಿ ಅಪ್ಪಾಶಾಸ್ತ್ರೀ ರಾಶಿವಡೆಕರ' ಈ ಮಹನೀಯರು ಸಂಸ್ಕೃತ ಚಂದ್ರಿಕೆಯಲ್ಲಿ ಜಗನ್ನಾಥ ಪಂಡಿತನ ವಿಷಯವಾಗಿ ಬರೆದಿಟ್ಟ ಲೇಖನಗಳೇ ಸಹಾಯಕಗಳಾಗಿವೆ ಚಂದ್ರಿಕೆಯ ಸಂಚಿಕೆಗಳಿಂದಲೇ ಬಹು ಭಾಗವು ಉಪಕೃತಸಾಗಿದೆ ಉಳಿದೆಡೆಗೆ ನಿರ್ಣಯಸಾಗರ ಮುದ್ರಾಲಯದ ಪಂಡಿತರು ಪಂಡಿತರಾಜನ ಆಯಾ ಗ್ರಂಥಗಳ ಆರಂಭದಲ್ಲಿ ಬರೆದಿರುವ ಪ್ರಸ್ತಾವನೆಗಳೂ, ಟಿಪ್ಪಣಿಗಳೂ ಸಹಾಯವನ್ನು ಮಾಡಿವೆ ಪಂಡಿತರಾಜನ ಗ್ರಂಥಗಳಂತೂ ಈ ಚರಿತ್ರವನ್ನು ಬರೆಯಲಿಕ್ಕೆ ಸಹಾಯಮಾಡಿವೆ ಎಂಬ ಮಾತನ್ನು ಹೇಳುವ ಕಾರಣವೇ ಇಲ್ಲ ಈ ಪುಸ್ತಕದ ವಾಚನದಿಂದ ಸಂಸ್ಕೃತಭಾಷಾಪ್ರಸಾರದ ಕಡೆಗೆ ಕೆಲವುಷ್ಟಿಗಾದರೂ ಜನರ ಲಕ್ಷ್ಯವು ತೊಡಗಿದರೆ ಪ್ರಸ್ತುತ ಲೇಖಕನು ತನ್ನ ಶ್ರಮವು ಸಫಲವಾಯಿತೆಂದು ಎಣಿಸುತ್ತಾನೆ

ಕಡೆಗೆ ಪುಸ್ತಕವನ್ನು ಬರಯುವಾಗ್ಗೆ ಸಹಾಯವನ್ನು ಮಾಡಿದ ಗ್ರಂಥಕರ್ತರ ಉಪಕಾರವನ್ನು ಮನ್ನಿಸಿ, ಪುಸ್ತಕವನ್ನು ಬರೆಯಲಿಕ್ಕೆ ಉತ್ತೇಜನವನ್ನು ಕೊಟ್ಟು ಮುದ್ರಣದ ಭಾರವನ್ನು ಹೊತ್ತ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಪ್ರಸ್ತುತ ಲೇಖಕನು ಋಣಿಯಾಗಿರುತ್ತಾನೆ.

ಗಲಗಲಿ
ಜುಲೈ ೧೯೧೭

ವಿದ್ವದ್ವಿಧೇಯ,
ಕೇಶವ ಶರ್ಮಾ

# ಅರ್ಪಣೆ

ನನ್ನ
ಸಂಸ್ಕೃತ ವಿದ್ಯಾಭ್ಯಾಸದ ಪರಮಗುರುಗಳೂ,
ವಿದ್ಯಾಪಕ್ಷಪಾತಿಗಳೂ ಆದ
**ಶ್ರೀಮತ್ಕೂರ್ಮಾಚಾರ್ಯ ಗಲಗಲಿ**
ಇವರ ಚರಣಸನ್ನಿಧಿಯಲ್ಲಿ
ಗ್ರಂಥಕರ್ತನು ಕೃತಜ್ಞತಾಸೂಚಕ ವಂದನೆಗಳೊಡನೆ
ಪರಮಾದರದಿಂದ ಅರ್ಪಿಸುತ್ತಾನೆ

— **ಕೇಶವಶರ್ಮಾ ಗಲಗಲಿ**

ಈ ಜಗತ್ತಿನಲ್ಲಿ ಎಷ್ಟೋ ಜನರು ಹುಟ್ಟುತ್ತಾರೆ ಮರಣ ಹೊಂದುತ್ತಾರೆ ಅವರನ್ನು ಗಣಿಸುವದು ಸಹ ಅಸಾಧ್ಯವು. ಜನನಿಯು ಜಠರದಿಂದ ಹೊರಹೊರಟ ಮಾತ್ರದಿಂದ ಹುಟ್ಟಿದ ಹಾಗಾಯಿತೇ ? ಇಂಥ ಜನ್ಮವನ್ನು ಮನುಷ್ಯರೇಕೆ ? ತಿರ್ಯಗ್ಜಂತುಗಳಾದರೂ ಪಡೆಯುವವು ಭರ್ತೃಹರಿಯು ಹೇಳಿದಂತೆ ತಾಯಿಯ ಯೌವನಕ್ಕೆ ಕುಠಾರದಂತಿರುವ ಈ ಜನ್ಮವನ್ನು ತಗೆದುಕೊಂಡು ಮಾಡುವದೇನು ? ಶರತ್ಕಾಲದ ಚಂದ್ರನ ಚಂದ್ರಿಕೆಯಂತೆ ಭಾಸ್ವರವಾದ ಯಾವನ ಕೀರ್ತಿ ದಶದಿಗಂಗನೆಯರ ಮುಖವನ್ನು ಚುಂಬಿಸುವದೊ, ಯಾವನಿಗೆ ಪ್ರಣಯಿನಿಯಂತೆ ಸಾಕ್ಷಾತ್ ಸರಸ್ವತೀದೇವಿ ಅಧೀನಳಾಗಿರುವಳೋ, ಯಾವನು ತನ್ನ ಸುಧಾಮಧುರವಾದ ಉಕ್ತಿಯಿಂದ ವಿಬುಧರ ಮನಸ್ಸನ್ನು ರಂಜಿಸುವನೊ, ಅವನು ಮಾತ್ರ ಹುಟ್ಟಿದನೆಂದು ಪಂಡಿತರು ಬಗೆಯುವರು ಇಂಥವರಲ್ಲಿಯೇ ನಮ್ಮ ಚರಿತ್ರನಾಯಕನಾದ ಜಗನ್ನಾಥ ಪಂಡಿತನೊಬ್ಬನಾಗಿದ್ದಾನೆ

ಜಗನ್ನಾಥನ ಜನನ ಸಮಯವು ಇನ್ನೂ ನಿಶ್ಚಯವಾಗಿ ತಿಳಿದಿಲ್ಲ ಆದರೆ ಬಹುವಿಧ ಪ್ರಮಾಣಗಳಿಂದ ಇವನು ದಿಲ್ಲೀ ಅರಸನನ್ನು ಆಶ್ರಯಿಸಿದ್ದನೆಂದು ಗೊತ್ತಾಗುವದು ಅದರಿಂದ ಅವನ ಅವಸ್ಥಿತಿಕಾಲವು ತಿಳಿಯುವಂತಿದೆ ಇವನು 'ಭಾಮಿನೀವಿಲಾಸ'ದ ಅಂತಿಮೋಲ್ಲಾಸದಲ್ಲಿ "ದಿಲ್ಲೀವಲ್ಲಭ ಪಾಣಿಪಲ್ಲವತಲೇ ನೀತಂ ನವೀನಂ ವಯಃ" ಎಂದು ತನ್ನ ತಾರುಣ್ಯವನ್ನು ದಿಲ್ಲೀಶ್ವರನ ಆಶ್ರಯದಲ್ಲಿಯೇ ಕಳೆದನೆಂದು ಪ್ರತಿಪಾದಿಸಿರುವನು ಆ ದಿಲ್ಲೀಶ್ವರನು ಯಾರು ? ಅಕಬರನೆಂದು ಕೆಲವರು, ಶಹಾಜಹಾನನೆಂದು ಕೆಲವರು ಹೇಳುವರು. ಜನರಲ್ಲಿ ಪ್ರಥಿತವಾದ ಮೊದಲನೆಯ ವಾರ್ತೆ ನಿರ್ಮೂಲವಾದದ್ದು ಜಗನ್ನಾಥನು ತನ್ನಿಂದ ರಚಿಸಲ್ಪಟ್ಟ 'ಅಸಫ ವಿಲಾಸ' ವೆಂಬ ಕಾವ್ಯದಲ್ಲಿ ತನ್ನ ಶಹಾಜಹಾನನ ಪ್ರಿಯತ್ವವನ್ನು ವರ್ಣಿಸಿದ್ದಾನೆ. ಅಂದ ಬಳಿಕ ಶಹಾಜಹಾನನ ಕಾಲದಲ್ಲಿ ಇವನು ಇದ್ದನೆಂಬಂತಾಯಿತು. ಜಗನ್ನಾಥನಿಂದ ವರ್ಣಿಸಲ್ಪಟ್ಟ ಮ್ಲೇಚ್ಛಭೂಪಾಲ ವರ್ಣನಾತ್ಮಕ ಕಾವ್ಯಗಳಲ್ಲಿ ದಿಲ್ಲೀಪತಿಯಾದ ಔರಂಗಜೇಬನ ಚರಿತ್ರವು ಕಾಣಿಸುವದಿಲ್ಲ ಆದ್ದರಿಂದ ಇವನು ಔರಂಗಜೇಬನನ್ನು ಆಶ್ರಯಿಸಲಿಲ್ಲೆಂಬಂತೆ ತೋರುವದು ಔರಂಗಜೇಬನು ಪಟ್ಟಕ್ಕೆ ಬರುವವರೆಗೆ ಇವನು ದಿಲ್ಲಿಯಲ್ಲಿ ಇರಬಹುದು ಅಂತು ಕ್ರಿ ಶ ೧೭ನಯ ಶತಮಾನವೆ ಇವನ ಅವಸ್ಥಿತ ಸಮಯವು ಎಂದರೆ ತಪ್ಪಾಗಲಾರದು.

ಈ ಪಂಡಿತೋತ್ತಂಸನ ಅಭಿಜನ ಸ್ಥಳವು ಯಾವದು ? ತೈಲಂಗವೆಂಬ ಎರಡನೇ ಹೆಸರುಳ್ಳ ಆಂಧ್ರದೇಶವೇ ಆಗಿರಬಹುದು ಯಾಕಂದರೆ ಇವನು ಅಸಫವಿಲಾಸ ಕಾವ್ಯದ ಅವಸಾನದಲ್ಲಿ "ತೈಲಂಗಕುಲಾವತಂಸೇನ ಪಂಡಿತರಾಜ ಜಗನ್ನಾಥೇನ" ಎಂದು ಹೇಳಿ

ರುವ ಗದ್ಯದಿಂದಲೂ "ತೈಲಂಗಾನ್ವಯ ಮಂಗಲಾಲಯ ಮಹಾಲಕ್ಷ್ಮೀದಯಾಲಾಲಿತಃ" ಎಂದು ಪ್ರಾಣಾಭರಣ ಕಾವ್ಯದಲ್ಲಿ ಹೇಳಿರುವ ಈ ಪದ್ಯಭಾಗದಿಂದಲೂ ಗೊತ್ತಾಗುವದು ಕೆಲವರು ತೈಲಂಗವೆಂಬುವದು ಕುಲನಾಮವೆನ್ನುವರು, ಹಾಗಾದರೆ ವೇಗಿನಾಡಕುಲದ ವನು ಎಂಬ ಮುಂದಿನ ವಚನಕ್ಕೆ ಬಾಧೆ ಬರುತ್ತದೆಂದರೆ ತೈಲಂಗಕುಲಾಂತರ್ಭೂತವಾದ ವೇಗಿನಾಡಕುಲವೆಂದು ಹೇಳಿ ಬಾಧೆ ಇಲ್ಲದಂತೆ ಮಾಡುವರು ಜಗನ್ನಾಥನ ಜನ್ಮಭೂಮಿ ನಿಶ್ಚಯವಾಗಿ ತಿಳಿಯದಿದ್ದರೂ ಅವನ ಪೂರ್ವಜರ ನಿವಾಸಿಸ್ಥಾನವು ತೈಲಂಗಪ್ರದೇಶ ವೆಂದು ಸಿದ್ಧವಾಗುವದು ನಿರ್ಣಯಸಾಗರ ಮುದ್ರಾಲಯದ ಪಂಡಿತರು ಕಾವ್ಯಮಾಲಿ ಯಲ್ಲಿ ಈ ಪಂಡಿತನು ತೈಲಂಗತಾವ್ಯಾಪ್ಯವಾದ ಕುಲಗಳೊಳಗಿನ ವೇಗಿನಾಡ ಸಂಜ್ಞ ಕುಲದಲ್ಲಿ ಹುಟ್ಟಿದನು ಎಂದು ಹೇಳಿರುವರು

ಇವನ ತಂದೆ ಸಮಸ್ತ ಪಂಡಿತಮಂಡಲೀಮಂಡನನಾದ ಪೇರಮ (ಪೇರು) ಭಟ್ಟ ನೆಂಬವನು ಇವನು ಅತಿ ಪ್ರಶಂಸನೀಯವಾದ ಅಧ್ಯಾಪಕನಾಗಿದ್ದನು ಇವನ ವೈದು ಷ್ಯಾದಿ ವಿಷಯದಲ್ಲಿ ರಸಗಂಗಾಧರವೆಂಬ ಗ್ರಂಥದ ಆರಂಭದಲ್ಲಿ ಪಂಡಿತರಾಜನು ಅನ್ನುವ ದೇನಂದರೆ :

ಶ್ರೀಮದ್ಜ್ಞಾನೇಂದ್ರಭಿಕ್ಷೋರಧಿಗತಸಕಲಬ್ರಹ್ಮವಿದ್ಯಾಪ್ರಪಂಚಃ |
ಕಾಣಾದೀರಾಕ್ಷಪಾದೀರಪಿ ಗಹನಗಿರೋ ಯೋ ಮಹೇಂದ್ರಾದವೇದೀತ್ ||
ದೇವಾದೇವಾಧ್ಯಗೀಷ್ಟ ಸ್ಮರಹರನಗರೇ ಶಾಸನಂ ಜೈಮಿನೀಯಂ |
ಶೇಷಾಂಕಪ್ರಾಪ್ತಶೇಷಾಹ್ವಯಭಣಿತಿರಭೂತ್ಸರ್ವವಿದ್ಯಾಧರೋ ಯಃ ||

ವಾರಾಣಸೀ ನಗರದಲ್ಲಿ ಜ್ಞಾನೇಂದ್ರ ಭಿಕ್ಷುವಿನಿಂದ ವೇದಾಂತಶಾಸ್ತ್ರವನ್ನೂ ಮಹೇಂದ್ರ ಪಂಡಿತನಿಂದ ನ್ಯಾಯವೈಶೇಷಿಕ ದರ್ಶನಗಳನ್ನೂ ಖಂಡದೇವನಿಂದ ಪೂರ್ವ ಮೀಮಾಂಸೆಯನ್ನೂ ಶೇಷೋಪಾಹ್ವವೀರೇಶ್ವರ ಪಂಡಿತನಿಂದ ಪಾತಂಜಲ ಮಹಾಭಾಷ್ಯ ವನ್ನೂ ಕಲಿತು ಯಾವನು ಸರ್ವವಿದ್ಯಾಧರನಾಗಿದ್ದನೋ

ಪಾಷಾಣಾದಪಿ ಪೀಯೂಷಂ ಸ್ಯಂದತೇ ಯಸ್ಯ ಲೀಲಯಾ |
ತಂ ವಂದೇ ಪೇರುಭಟ್ಟಾಖ್ಯಂ ಲಕ್ಷ್ಮೀಕಾಂತ ಮಹಾಗುರುಮ್ ||

ಮತ್ತು ಯಾವನ ಲೀಲೆಯಿಂದ ಪಾಷಾಣದಿಂದ (ಮೂರ್ಖನಿಂದ) ಕೂಡ ಅಮೃತವು (ಸರಸ ಸರಸ್ವತಿಯು) ಹೊರಡುವದೋ, ಅಂಥಹ ಲಕ್ಷ್ಮೀಕಾಂತನಾದ ನಮ್ಮ ತಂದೆ ಯನ್ನು (ಪೇರಮಭಟ್ಟನನ್ನು) ನಮಿಸುವೆನು 'ಪಾಷಾಣಾದಪಿ' ಎಂಬ ಶ್ಲೋಕದಿಂದ ಪೇರುಭಟ್ಟನು ಉತ್ತಮ ಅಧ್ಯಾಪಕನಾಗಿದ್ದನೆಂದು ತಿಳಿಯುವದು.

ಮತ್ತು ಇದೇ ಪದ್ಯದಲ್ಲಿದ್ದ ಮಹಾಗುರುಪದದಿಂದ ಜಗನ್ನಾಥನು ತಂದೆಯ ಬಳಿಯ ಲ್ಲಿಯೇ ಪ್ರಾಯಃ ಎಲ್ಲ ಶಾಸ್ತ್ರಗಳನ್ನು ಕಲಿತನೆಂದು ಗೊತ್ತಾಗುವದು. ಮನೋರಮಾ ಕುಚಮರ್ದನ ಗ್ರಂಥದಲ್ಲಿ ತನ್ನ ತಂದೆಯ ಗುರುವಾದ ಶೇಷೋಪಾಹ್ವ ವೀರೇಶ್ವರ ಪಂಡಿತ ನಲ್ಲಿ ಕಿಂಚಿತ್ತು ಅಧ್ಯಯನ ಮಾಡಿದ್ದನೆಂದು ಹೇಳಲ್ಪಟ್ಟಿದೆ ಉಪರಿತನ ಪದ್ಯದಲ್ಲಿ ನಿರ್ದಿಷ್ಟ

ಮಾನರಾದ ಜ್ಞಾನೇಂದ್ರಭಿಕ್ಷು, ಮಹೇಂದ್ರ ಮೊದಲಾದ ವಿದ್ವಾಂಸರ ಕಾಲವು ನೆಟ್ಟಗೆ ಗೊತ್ತಾಗುವದಿಲ್ಲ.

ಸುಶಿಕ್ಷಿತನಾದ ಪೇರಮಭಟ್ಟನ ಪ್ರಭಾವವನ್ನು ಎಷ್ಟೆಂದು ವರ್ಣಿಸುವ, ಆ ಮಹಾಮಹಿಮನ ಪ್ರಭಾವದಿಂದಲೇ ಅಶೇಷ ಪಂಡಿತ ಜನರ ಗರ್ವವನ್ನು ಹರಣ ಮಾಡಲು ಸಮರ್ಥನಾದ ಜಗನ್ನಾಥನು ಉಂಟಾಗಲಿಲ್ಲವೇ ? ಈ ಪೇರಭಟ್ಟನಿಗೆ ಪುರಂಧ್ರೀಗಣದಿಂದ ವಂದನೀಚರಿತ್ರೆಯಾದ ಮೂರ್ತಿಮಂತಳಾದ ಲಕ್ಷ್ಮಿಯೋ ಎನ್ನುವಂತೆ ಲಕ್ಷ್ಮಿಯೆಂಬ ಹೆಸರಿನ ಹೆಂಡತಿ ಇದ್ದಳು. ಅಂತಹ ದಂಪತಿಗಳ ಪುತ್ರನು ಪಂಡಿತರಾಜ ಜಗನ್ನಾಥನು. 'ಸುಕ್ಷೇತ್ರಪತಿತವಾದ ಬೀಜವು ಅಧಿಕವಾದ ಉನ್ನತಿಯ ಸಂಪತ್ತನ್ನು ಹೊಂದುವದು' ಎಂದು ಪ್ರಾಜ್ಞರು ಹೇಳುವ ಮಾತು ಸುಳ್ಳಲ್ಲ. ಅಪ್ರತಿಹತವೈದುಷ್ಯವುಳ್ಳವನೂ ರಸಿಕಶೇಖರನೂ ಕವಿವರ್ಯನೂ ಆದ ಜಗನ್ನಾಥ ಪಂಡಿತನನ್ನು ಹಡೆದ ತಾಯಿತಂದೆಗಳು ಧನ್ಯರಲ್ಲವೇ ! ! !

ಜಗನ್ನಾಥನು ಭಾಮಿನೀವಿಲಾಸದಲ್ಲಿ ದಿಲ್ಲೀಶ್ವರನ ಸಮೀಪದಲ್ಲಿ ತನ್ನ ತಾರುಣ್ಯವನ್ನು ಕಳೆದನೆಂದು ಹೇಳಿದ್ದಾನಷ್ಟೆ ? ಅಂದ ಬಳಿಕ ಇವನು ಪ್ರೌಢನಾಗುವಷ್ಟರಲ್ಲಿ ಇವನ ಅಧ್ಯಯನವು ಸಮಾಪ್ತವಾಗಿರಬೇಕು. ಇದು ಸಂಭವನೀಯವೇ ಅಶೇಷ ಶಾಸ್ತ್ರ ಪಾರಂಗತನಾದ ತಂದೆ ಅಧ್ಯಾಪಕನು, ಪಂಡಿತನಂತಹ ಪ್ರಕೃಷ್ಟತರ ಬುದ್ಧಿ ವಿಭೂಷಿತನಾದ ಮಗನು ಅಧ್ಯೇತೃವು ಈ ಅನುರೂಪ ದ್ವಂದ್ವವು ಸಂಘಟಿಸಲು ವಶಂವದೆಯಾದ ರಮಣಿಯಂತೆ ವಿದ್ಯಾವರವರ್ಣನಿಯ ಅಧೀನಳಾಗುವದು ಅಸಾಧ್ಯವೇ? ಜಗನ್ನಾಥನಂಥಹ ಬುದ್ಧಿಮಂತ ಶಿಷ್ಯನು ಸಿಕ್ಕಿರಲು ಜನಕೇತರರು ಕೂಡ ಅವನನ್ನು ಪ್ರಾವೀಣ್ಯಯುಕ್ತನನ್ನಾಗಿ ಮಾಡದೆ ಇರಲಾರರು. ಅಂದ ಬಳಿಕ ಸಾಕ್ಷಾತ್ ತಂದೆಯೇ ಇಂತಹ ನಿರುಪಮ ಶಿಷ್ಯನ ಗುರುವಾದ ಬಳಿಕ ಕೇಳುವದೇನು ? ಉತ್ಸಾಹವಂತನಾಗಿ ಮಗನನ್ನು ಅದ್ವಿತೀಯ ಪಂಡಿತನನ್ನಾಗಿ ಮಾಡಿದನು.

## ಪಂಡಿತರಾಜನ ಅಭಿಮಾನೋಕ್ತಿಗಳು

ಜಗನ್ನಾಥ ಪಂಡಿತನ ಗ್ರಂಥಗಳನ್ನು ಅವಲೋಕಿಸಿದರೆ ಅಲ್ಲಲ್ಲಿ ಆ ಮಹಾಶಯನ ಅಭಿಮಾನದಿಂದ ತುಂಬಿ ತುಳುಕುವ ವಚನಗಳು ಕಂಡುಬರುವವು ಆತ್ಮಸ್ತುತಿಯು ದೃಗ್ಗೋಚರವಾಗುವದು. ಆತ್ಮಸ್ತುತಿಯನ್ನು ಮಾಡಿಕೊಳ್ಳಬೇಕೋ, ಬಾಧವೋ ? ಎಂಬ ಪ್ರಶ್ನೆಕ್ಕೆ ಸರ್ವರೂ ಏಕಕಂಠ್ಯದಿಂದ "ಶಕ್ರೋsಪಿ ಲಘುತಾಂ ಯಾತಿ ಸ್ವಯಂ ಪ್ರಖ್ಯಾಪಿತೈರ್ಗುಣೈಃ" ಇಂದ್ರನೂ ಕೂಡ ತನ್ನನ್ನು ತಾನೇ ಹೊಗಳಿಕೊಂಡರ ಶೀಳ ತನವನ್ನೈದುತ್ತಿರಲು ನಮ್ಮಂಥವರ ಪಾಡೇನು ? ನಾವೇಕೆ ಆತ್ಮಸ್ತುತಿಯನ್ನು ಮಾಡಿಕೊಳ್ಳಬೇಕು ? ನಮ್ಮಿಂದ ಮಹತ್ತರ ಕಾರ್ಯವನ್ನು ನಾವು ಮಾಡಿದರಾಯಿತು, ಹೊಗಳುವ ಇಲ್ಲವೇ ನಿಂದಿಸುವ ಕೆಲಸವು ಜನರದು, ಅದು ನಮ್ಮದಲ್ಲ. ನಾವು ಎಷ್ಟೇ ಶ್ರೀಮಂತರಾಗಲಿ ಪಂಡಿತರಾಗಲಿ ನಮ್ಮನ್ನು ನಾವೇ ಹೊಗಳಿಕೊಂಡರೆ ಮೂರ್ಖತನವು

ನಮ್ಮ ಪಾಲಿಗೆ ಬರುವದು, ಎಂದು ಉತ್ತರ ಕೊಡುವರು ಈ ದೃಷ್ಟಿಯಿಂದ ನೋಡಿದರೆ ಆತ್ಮಸ್ತುತಿಯು ಯೋಗ್ಯವಾದುದಲ್ಲೆಂದು ಸರ್ವರೂ ಒಪ್ಪಿಕೊಳ್ಳಲೇಬೇಕಾಗುವದು ಪೃಥಾವಲ್ಗನಾಪ್ರೂರಿತ ವಾಣಿಯು ವ್ಯರ್ಥವಾದದ್ದೇ ಸರಿ

ಆದರೆ ಇನ್ನೂ ಸ್ವಲ್ಪ ವಿಚಾರಾಂಶವನ್ನು ಮುಂದಕ್ಕೆ ನೂಕಿದರೆ ಯಥಾರ್ಥವಾದ ಗರ್ವೋಕ್ತಿಯು ಅಯೋಗ್ಯವಾದದ್ದಲ್ಲವೆಂದು ಕೆಲವರ ಅಭಿಪ್ರಾಯವಿರುವದು ನಮಗೆ ಕಂಡುಬರುವದು ಕೈಲಾಸವಾಸಿಗಳಾದ ವಿದ್ವದ್ವರ್ಯ ವಿಷ್ಣುಶಾಸ್ತ್ರಿ ಚಿಪಳೂಣಕರವರು ನಿಬಂಧ ಮಾಲೆಯಲ್ಲಿ ಯಥಾರ್ಥವಾದ ಅಭಿಮಾನೋಕ್ತಿಯು ಅಯೋಗ್ಯವಾದದ್ದಲ್ಲವೆಂದೇ ಸಾಧನೆ ಮಾಡಿದ್ದಾರೆ ಈ ಮಾತಿಗೆ ಪಂಡಿತರಾಜನ ಮತ್ತು ಭವಭೂತಿ ಕವಿಯ ವಚನಗಳನ್ನು ಉದಾಹರಿಸಿದ್ದಾರೆ

ಪ್ರಿಯ ಪಾಠಕರೇ ! ಕಾಲಿದಾಸನು ಎಲ್ಲಿಯೂ ತನ್ನ ಆತ್ಮಶ್ಲಾಘೆಯನ್ನು ಮಾಡಿಕೊಳ್ಳಲಿಲ್ಲ ಅವನ ಕಾವ್ಯಗಳ ಗುಣಗಳನ್ನು ತಿಳಿಯುವ ರಸಿಕ ಜನರು ಅವನ ಸುತ್ತಲಿದ್ದರು, ಕವಿಯ ಸುತ್ತಲು ಗುಣಜ್ಞರಾದ ಜನರಿದ್ದು ಕವಿಯನ್ನು ಕೊಂಡಾಡಹತ್ತಿದರೆ ಪ್ರಾಯಶಃ ಅವನ ಬಾಯಿಂದ ಗರ್ವೋದ್ಗಾರವು ಹೊರಡುವದಿಲ್ಲ. ಸುತ್ತಲೂ ಅರಸಿಕ ಜನರಿದ್ದು ಅಗುಣಜ್ಞ ಸಮಾಜದಲ್ಲಿ ಒಬ್ಬ ಕವಿಯು ಹುಟ್ಟಿದ್ದಾದರೆ ಅವನನ್ನು ಆ ಜನರು ಕೊಂಡಾಡುವದೆಂತು ? ಭವಭೂತಿ ಕವಿಗೆ ಮಾತ್ರ ಇಂತಹ ಸ್ಥಿತಿಯಿದ್ದಿತು. ಅವನ ಕಾವ್ಯವು ಆ ಗಣ ಸಮಾಜದಲ್ಲಿ ಮಾನವನ್ನು ಹೊಂದಲಿಲ್ಲ. "ಅರಸಿಕೇಷು ಕವಿತ್ವನಿವೇದನಂ ಸಿರಸಿ ಮಾ ಲಿಖ | ಮಾ ಲಿಖ ಮಾ ಲಿಖ" ಎಂದು ಅನಿಸಿಬಿಟ್ಟಿತು ಆದುದರಿಂದಲೇ ಅವನ ಬಾಯಿಂದ "ನಮ್ಮ ಅಪಮರ್ಯಾದೆಯನ್ನು ಯಾರು ಮಾಡುವರು ? ಅವರು ಏನನ್ನಾದರೂ ತಿಳಿದುಕೊಳ್ಳಲಿ. ಅವರನ್ನುದ್ದಿಶ್ಯಸಮ್ಮೇಯತ್ನವಿಲ್ಲ. ನನ್ನ ಸಮಾನ ಧರ್ಮಿಯು ಈ ಜಗತ್ತಿನಲ್ಲಿ ಈಗ ಇದ್ದರೆ, ಅಥವಾ ಮುಂದೆ ಹುಟ್ಟಿದರೆ ಅವನ ಸಲುವಾಗಿ ಈ ಪ್ರಯತ್ನವಿರುವದು ಕಾಲವು ನಿರವಧಿಯಾಗಿರುವದರಿಂದ ನನ್ನ ಸಮಾನ ಧರ್ಮಿಯಾದ ಮನುಷ್ಯನು ಮುಂದೆ ಹುಟ್ಟಬಹುದು ಜಗತ್ತು ವಿಸ್ತೃತವಾಗಿರುವದರಿಂದ ಈಗಾದರು ಇರಬಹುದು " "ಹ್ಯಾಗೆ ಸ್ತ್ರೀಯರ ಸಾಧುತ್ವದಲ್ಲಿ ಜನರು ದುರ್ಜನರಾಗಿರುವರೋ ಹಾಗೆ ವಾಣಿಯು ಸಾಧುತ್ವದ ವಿಷಯದಲ್ಲಿಯೂ ಜನರು ದುರ್ಜನರಾಗಿರುವರು" ಇಂತಹ ಉದ್ಗಾರಗಳು ಹೊರಟದ್ದರಲ್ಲೇನಾಶ್ಚರ್ಯವು ? ಇದರಂತೆ ಜಗನ್ನಾಥ ಪಂಡಿತನಿಗಾದರೂ ಅರಸಿಕ ಸಮುದಾಯದಲ್ಲಿ ಕೆಲವು ದಿವಸಗಳವರೆಗಾದರೂ ವಾಸಿಸುವ ಪ್ರಸಂಗವು ಬಂದಿರಬಹುದು † ಆದುದರಿಂದಲೇ ಅವನ

† ಆದುದರಿಂದಲೇ ಪಂಡಿತರಾಜನ ಮುಖಕಮಲದಿಂದ ಕೆಳಗಣ ಉದ್ಗಾರವು ಹೊರಟಿರುವದು :
'ಮದ್ವಾಣಿ ಮಾಕುರು ವಿಷಾದಮನಾದರೇಣ' ಮಾತ್ಸರ್ಯಮಗ್ನಮನಸಾಂ ಸಹಸಾ
ಖಲಾನಾಂ ॥
ಕಾವ್ಯಾರವಿಂದ ಮಕರಂದಮಧುವ್ರತಾನಾಮಾಸ್ಯೇಷುಧಾಸ್ಯಸಿತಮಾಂ ಕಿಯತೋ
ವಿಲಾಸಾನ್' ॥ ೧ ॥

ಮುಖಕಮಲದಿಂದ ಅಭಿಮಾನಪೂರಿತ ವಚನಗಳು ಹೊರಟಿರಬಹುದು. ಅವು ಆಯ ಥಾರ್ಥವಾಗಿಲ್ಲವಷ್ಟೇ ? ಆ ಪಂಡಿತನ ಅದ್ವಿತೀಯ ಪಾಂಡಿತ್ಯವು ಸರ್ವಮಾನ್ಯವಾಗಿದೆ ಯಷ್ಟೇ ? ವ್ಯಸನಾಧೀನನಾದ ಬ್ರಾಹ್ಮಣನ ಹಾಡುಗಳೆಂದು, ನಿಂದ್ಯವಾದ ದೃಷ್ಟಿ ಯಿಂದ ಆ ಮಹಾಶಯನ ಉಕ್ತಿಗಳನ್ನು ಅವಲೋಕಿಸಬಿದ್ದರಾಯಿತು. ಕವಿಗೆ ಉತ್ತೇ ಜನವು ಸುತ್ತಲಿರುವ ಜನರಿಂದ ದೊರೆಯದಿದ್ದರೆ ಆವನ ಬಾಯಿಂದ ಇಂತಹ ಉದ್ಗಾರ ಗಳು ಹೊರಡುವವು ಅವನ್ನು ನಿಂದ್ಯವಾದ ದೃಷ್ಟಿಯಿಂದ ಅವಲೋಕಿಸಬೇಡಿರಿ ಅವುಗಳಲ್ಲಿ ಅನಿತರ ಸಾಧಾರಣವಾದ ಮಾಧುರ್ಯವು ತುಂಬಿರುವದು ಭಗ್ನೋತ್ಸಾಹಿ ಗಳ ಉತ್ಸಾಹವನ್ನು ಪುನರುಜ್ಜೀವಿಸುವ ಸಂಜೀವನೌಷಧಿಯು ಅವುಗಳಲ್ಲಿ ಅಡಕ ವಾಗಿರುವದು. ಮೇಲಿನ ಭವಭೂತಿಯ ಸದುಕ್ತಿಯಿಂದ ಲೋಕನಿಂದೆಯಿಂದ ನಿರ್ವಿಣ್ಣ ರಾದ ಎಷ್ಟು ಜನರು ತಮ್ಮ ಮನಸ್ಸನ್ನು ಸಮಾಧಾನ ಮಾಡಿಕೊಂಡು ಮಹತ್ಕಾರ್ಯ ವನ್ನು ಮಾಡಿರುವದಿಲ್ಲ.

ವಾಚಕ ಮಹಾಶಯರೇ ! ಪಂಡಿತರು ಅಹಂಕಾರಶೂನ್ಯರಾಗಿದ್ದರೆ ಸುವರ್ಣದಲ್ಲಿ ಸೌರಭ್ಯವು ಉಂಟಾದಂತಾಗುತ್ತದೆ ಎಂಬ ವಚನವನ್ನು ನಾವೂ ಒಡಂಬಡುವೆವು ಭರ್ತೃಹರಿಯು .

ತದಾ ಸರ್ವಜ್ಞೋಽಸ್ಮೀತ್ಯ ಭವದವಲಿಪ್ತಂ ಮಮ ಮನಃ ||
ಯದಾ ಕಿಂಚಿಜ್ಞೋಽಹಂ ದ್ವಿಪ ಇವ ಮದಾಂಧಃ ಸಮಭವಮ್ |
ಯದಾ ಕಿಂಚಿತ್ ಕಿಂಚಿತ್ ಬುಧಜನಸಕಾಶಾದವಗತಂ |
ತದಾ ಮೂರ್ಖೋಽಸ್ಮೀತಿ ದ್ವಿಪ ಇವ ಮದೋ ಮೇ ವ್ಯಪಗತಃ ||

ಯಾವಾಗ್ಗೆ ನನಗೆ ಸ್ವಲ್ಪ ತಿಳಿಯುತ್ತಿತ್ತೋ ಆಗ್ಗೆ ನಾನು ಮದೋನ್ಮತ್ತವಾದ ಆನೆಯಂತೆ ಮದಾಂಧನಾದೆನು. ಸರ್ವಜ್ಞನು ನಾನೇ ಇರುವೆನೆಂದು ನನಗೆ ಗ್ರಹಿಕೆ ಯುಂಟಾಯಿತು. ಆದರೆ ಯಾವಾಗ ಪಂಡಿತರ ಸಮೀಪವನ್ನೈದಿ ಅವರಿಂದ ಕಿಂಚಿತ್ ಕಿಂಚಿತ್ ಜ್ಞಾನವನ್ನು ಪಡೆದುಕೊಳ್ಳಹತ್ತಿದೆನೋ, ಆವಾಗ ಮೂರ್ಖನಿರುವೆನೆಂದು ನನಗೆ ಪ್ರತೀತಿಯುಂಟಾಯಿತು. ಆನೆಯಂತೆ ನನ್ನ ಮದವೆಲ್ಲ ಇಳಿದು ಹೋಯಿತು.

ಈ ಉಕ್ತಿಯು ಪಂಡಿತರಲ್ಲಿ ಅನುಭವಕ್ಕೆ ಬಂದರೆ ಮತ್ತಿಷ್ಟು ಭೂಷಣವೇ ಸರಿ. ಇದೂ ನಮಗೆ ಸಮ್ಮತವುಂಟು ಆತ್ಮಸ್ತುತಿಯನ್ನು ಮಾಡಿಕೊಳ್ಳಬಾರದೆಂದು ನಮ್ಮ ಖಂಡಿತವಾದ ಅಭಿಪ್ರಾಯವಿದ್ದರೂ ಜಗನ್ನಾಥನ ಸುಧಾಮಯವಾದ ಭಣಿತಿಗಳಿಗೆ ನಾವು ದೋಷಣವನ್ನು ಕೊಡಲಿಚ್ಛಿಸುವದಿಲ್ಲ. ಹಾಗೆ ಮಾಡಲು ನಮ್ಮ ಮನಸ್ಸು

---

ಎಲೈ ನನ್ನ ಕಾವ್ಯವೇ ! ಹೊಟ್ಟೆಕಿಚ್ಚಿನಿಂದ ಹುರಪಳಿಸುವ ಜನರ ತಿರಸ್ಕಾರದಿಂದ ನೀನು ವಿಷಾದವನ್ನು ಹೊಂದಬೇಡ ಕಾವ್ಯಕಮಲದ ಮಕರಂದವನ್ನು ಆಸ್ವಾದಿಸುವ ಭ್ರಮರಗಳೂ ಉಂಟು. ಅವರ (ರಸಿಕರು) ಮುಖಕಮಲಗಳಲ್ಲಿ ಆಹಾ ! ಎಷ್ಟು ವಿಭ್ರಮಗಳನ್ನು ಮಾಡುವಿ !!!

ಒಡಂಬಡದು ಇತರರಲ್ಲಿ (ಯೋಗ್ಯತೆ ಇಲ್ಲದವರಲ್ಲಿ) ಆತ್ಮಸ್ತುತಿಯು ದೋಷಕ್ಕೆ ಪಾತ್ರವಾದರೂ ಈ ಮಹನೀಯನ ಅಭಿಮಾನೋಕ್ತಿಗಳಿಂದ ಅವನಿಗೆ ದೋಷವು ಬಾರದೆ ಪ್ರತ್ಯುತ ಭೂಷಣವೇ ಉಂಟಾಗಿದೆ ಈ ಮಹಾಮಹಿಮನ ಸುಧಾಮಯವಾದ ಅಭಿಮಾನೋಕ್ತಿಗಳನ್ನು ಸಹೃದಯರು ನೋಡಬೇಕು

ದಿಗಂತೇ ಶ್ರೂಯಂತೇ ಮದಮಲಿನ ಗಂಡಾಃ ಕರಟಿನಃ ।
ಕರಿಣ್ಯಃ ಕಾರುಣ್ಯಾಸ್ಪದಮಸಮಶೀಲಾಃ ಖಲುಮೃಗಾಃ ॥
ಇದಾನೀಂ ಲೋಕೇಸ್ಮಿನ್ನನುಪಮ ಶಿಖಾನಾಂ ಪುನರಯಂ ।
ನಖಾನಾಂ ಪಾಂಡಿತ್ಯಂ ಪ್ರಕಟಯತು ಕಸ್ಮಿನ್ಮೃಗಪತಿಃ ॥

ಎಲ್ಲಿಯೋ ದಿಗಂತದಲ್ಲಿ ಮದೋದಕದಿಂದ ಮಲಿನವಾದ ಕಪೋಲಸ್ಥಳಗಳಿಂದ ಶೋಭಿಸುವ ಗಜಗಳು ಉಂಟೆಂದು ಕೇಳಲ್ಪಡುತ್ತದೆ. ಮುಂದೆ ಒಂದು ಒಂದು ಮದೋನ್ಮತ್ತವಾದ ಗಜವೂ ಸಿಲ್ಲಲೊಲ್ಲದು ಇಲ್ಲಿದ್ದ ಹೆಣ್ಣಾನೆಗಳೇ ? ಅವುಗಳನ್ನೇನು ಪೀಡಿಸುವದು ! ಕರುಣಾಪಾತ್ರವಾದುವುಗಳು ಮುಂದಿದ್ದ ಮೃಗಗಳ ಮೇಲೆ ಕೈಯೆತ್ತುವದೇನು ಜಾಣತನವು ! ಅವು ನನ್ನ ಸಮಾನವಾದ ಪರಾಕ್ರಮವುಳ್ಳವುಗಳೇ ಅಲ್ಲ ಅಂದಬಳಿಕ ಈ ಸಿಂಹವು ( ಜಗನ್ನಾಥ ಪಂಡಿತನು ) ತನ್ನ ತೀಕ್ಷ್ಣವಾದ ನಖಗಳ ಪಾಂಡಿತ್ಯವನ್ನು ಎಲ್ಲಿ ತೋರಿಸಬೇಕು ?

ಅಪ್ರಸ್ತುತ ಪ್ರಶಂಸೆಯಿಂದ ಜಗನ್ನಾಥನು ತನ್ನೊಡನೆ ವಿವಾದಿಸಲು ಅರ್ಹನಾದ ಪಂಡಿತನು ಒಬ್ಬನೂ ಇಲ್ಲವೆಂದು ಈ ಶ್ಲೋಕದಲ್ಲಿ ಪ್ರತಿಪಾದಿಸಿದ್ದಾನೆ

ಗಿರಾಂ ದೇವೀ ವೀಣಾ ಗುಣರಣನ ಹೀನಾದರಕರಾ ।
ಯದೀಯಾನಾಂ ವಾಚಾಮ್ಮತಮಯಮಾಚಾಮತಿ ರಸಂ ॥
ವಚಸ್ತಸ್ಯಾಕರ್ಣ್ಯ ಶ್ರವಣಶುಭಗಂ ಪಂಡಿತಪತೇ ।
ರಧುನ್ವನ್ಮೂರ್ಧಾನಂ ನೃಪಶುರಥವಾಯಂ ಪಶುಪತಿಃ ॥

ಸಾಕ್ಷಾತ್ ಸರಸ್ವತಿಯು ಕೂಡ ಮಂಜುಲ ಧ್ವನಿ ಮಾಡುವ ವೀಣೆಯನ್ನು ಬಾರಿಸುವದರಲ್ಲಿ ಅನಾದರವುಳ್ಳವಳಾಗಿ ಯಾವನ ಅಮೃತಮಯವಾದ ವಾಣಿಯ ರಸಪಾನವನ್ನು ಮಾಡುತ್ತ ಕೂಡ್ರುವಳೋ, ಅಂತಹ ಪಂಡಿತಪತಿಯಾದ ಜಗನ್ನಾಥನ ಶ್ರವಣಸುಭಗವಾದ ವಚನವನ್ನು ಕೇಳಿ ತಲೆಯನ್ನು ಅಲ್ಲಾಡಿಸದವನು ಯಾವನಿರಬೇಕು ? ನರಪಶುವು, ಅಥವಾ ಪಶುಪತಿಯು (ದೇವರು) ಸರಸಮಧುರ ಪದವಿನ್ಯಾಸದಿಂದ ಸರಸ್ವತೀದೇವಿಯ ಪ್ರೀತಿಗೆ ಪಾತ್ರರಾದ ಜಗನ್ನಾಥನಂತಹ ವಿದ್ವಾಂಸರು ವಿರಲವೇ ಸರಿ. ಇವನ ಕಾವ್ಯಗಳಲ್ಲಿರುವ ಲೋಕೋತ್ತರ ಪ್ರಸಾದವನ್ನೂ, ಅಲೌಕಿಕ ಮಾಧುರ್ಯವನ್ನೂ, ನಿರುಪಮ ಸೌಂದರ್ಯವನ್ನೂ, ಮನೋಹರತ್ವವನ್ನೂ ಕಂಡು ಸರಸ್ವತೀದೇವಿಯು ತನ್ನ ವೀಣಾನಿನಾದದಲ್ಲಿ, ಅನುರಕ್ತಳಾಗದಿದ್ದದ್ದೇನಾಶ್ಚರ್ಯವಲ್ಲ ಜಗನ್ನಾಥನ

ವಾಣಿಯನ್ನು ಕೇಳಿ ತಲೆದೂಗದ ರಸಿಕನು ಒಬ್ಬನಾದರೂ ಜಗತ್ತಿನಲ್ಲಿರುವನೇ ? ತಿರುತಿರುಗಿ ಓದಿದ ಹಾಗೆ ಇವನ ಪದ್ಯಗಳಲ್ಲಿ ಹೆಚ್ಚು ಹೆಚ್ಚು ರಸಪ್ರವಾಹವು ಕಂಗೊಳಿಸಿರುವದು

ಭಾಮಿನೀವಿಲಾಸದ ಅಂತಿಮೋಲ್ಲಾಸದಲ್ಲಿಯಂತೂ ಪಂಡಿತರಾಜನ ಅಭಿಮಾನೋಕ್ತಿಗಳ ಯಥೇಚ್ಛವಾದ ಪಕ್ವಾನ್ನವೇ ವಾಚಕರಿಗೆ ಸಿಕ್ಕುವದು.

ಮಧು ದ್ರಾಕ್ಷಾಸಾಕ್ಷಾದಮೃತಮಥ ವಾಮಾಧರಸುಧಾ ।
ಕದಾಚಿತ್ ಕೇಷಾಂಚಿನ್ನ ಖಲು ವಿದಧೀರನ್ನಪಿ ಮುದಂ ||
ಧ್ರುವಂ ತೇ ಜೀವಂತೋಽಪ್ಯಹಹಂ ಮೃತಕಾ ಮಂದಮತಯೋ ।
ನ ಯೇಷಾಮಾನಂದಂ ಜನಯತಿ ಜಗನ್ನಾಥ ಭಣಿತಿಃ ||

ಜೇನುತುಪ್ಪ, ದ್ರಾಕ್ಷೆ, ಸಾಕ್ಷಾತ್ ಅಮೃತ, ರಮಣಿಯ ಅಧರಸುಧೆ, ಇವುಗಳು ಒಂದು ಕಾಲದಲ್ಲಿಯಾದರೂ ಕೆಲವರಿಗಾದರೂ ಆನಂದವನ್ನು ಕೊಡಲಿಕ್ಕಿಲ್ಲ ಅಶಕ್ತರಿಗೆ ಬೇನೆಯುಳ್ಳವರಿಗೆ ಇವು ಆನಂದವನ್ನೆಂತು ಉಂಟುಮಾಡುವವು ? ಆದರೆ ಜಗನ್ನಾಥ ವಾಣಿಯು ಎಲ್ಲರಿಗೂ ಎಲ್ಲ ಕಾಲಗಳಲ್ಲಿಯೂ ಆನಂದವನ್ನುಂಟು ಮಾಡಲೇಬೇಕು ಒಂದು ವೇಳೆ ನನ್ನ ವಾಣಿಯಿಂದ ಆಹತಭಾಗ್ಯರಿಗೆ ಆನಂದ ಉಂಟಾಗದಿದ್ದರೆ ಅವರು ಜೀವಂತರಿದ್ದೂ ಸತ್ತ ಹಾಗೇ ಸರಿ

ಆಮೂಲಾದ್ರತ್ನಸಾನೋರ್ಮಲಯವಲಯಿತಾದಾಚ ಕೂಲಾತ್ಪಯೋಧೇ ।
ರ್ಯಾವಂತಃ ಸಂತಿ ಕಾವ್ಯಪ್ರಣಯನ ಪಟವಸ್ತೇ ವಿಶಂಕಂ ವದಂತು ||
ಮೃದ್ವೀಕಾಮಧ್ಯನಿರ್ಯನ್ಮಸೃಣರಸಝರೀಮಾಧುರೀಭಾಗ್ಯಭಾಜಾಂ ||
ವಾಚಾಮಾಚಾರ್ಯತಾಯಾಃ ಪದಮನುಭವಿತುಂ ಕೋಽಸ್ತಿ ಧನ್ಯೋ ಮದನ್ಯಃ ।

ಮೇರುಪರ್ವತದಿಂದ ಮಲಯಗಿರಿಯಿಂದ ವೇಷ್ಟಿತವಾದ ಸಮುದ್ರದ ವರೆಗೆ ಇದ್ದ ಕಾವ್ಯಪ್ರಣಯನ ಪಟುಗಳೆಲ್ಲ ನಿರ್ವಿಶಂಕವಾಗಿ ಹೇಳಲಿ, ದ್ರಾಕ್ಷಾಫಲಗಳ ಮಧ್ಯದಿಂದ ಹೊರಡುವ ಮಧುರಸದ ನಿರ್ಝರದ ಭಾಗ್ಯವನ್ನು ಅನುಭವಿಸುವ ವಚನಗಳ ದೀಕ್ಷಾ ಬದ್ಧ ಗುರುತ್ವವನ್ನು ಅನುಭವಿಸಲು ನನ್ನನ್ನುಳಿದು ಯಾವನು ಸಮರ್ಥನಿರುವನು

"ದಿಲ್ಲೀವಲ್ಲಭ ಪಾಣಿಪಲ್ಲವತಲೇ ನೀತಂ ನವೀನಂ ವಯಃ ।
ಸಂಪ್ರತ್ಯುಜ್ಝಿತವಾಸನಂ ಮಧುಪುರೀಮಧ್ಯೇ ಹರಿಃ ಸೇವ್ಯತೇ ।
ಸರ್ವಂ ಪಂಡಿತರಾಜರಾಜತಿಲಕೇನಾಕಾರಿ ಲೋಕಾಧಿಕಂ" ||

ತಾರುಣ್ಯವನ್ನಂತೂ ಸಾರ್ವಭೌಮನಾದ ದಿಲ್ಲೀಪತಿಯ ಕೈಕೆಳಗೆ ಕಳೆದೆನು ಈಗ ಮಧುರೆಯ ಮಧ್ಯದಲ್ಲಿ ಎಲ್ಲ ಕಾಂಕ್ಷೆಗಳನ್ನು ನಿರಾಕರಿಸಿ ಹರಿಯನ್ನು ಸೇವಿಸಿದೆನು. ಈ

ಪಂಡಿತರಾಜತಿಲಕನಿಂದ ಮಾಡಲ್ಪಟ್ಟ ಎಲ್ಲ ಕೆಲಸವೂ ಅನನ್ಯಸಾಧಾರಣವಾಗಿಯೇ ಇರುವದು

ಪ್ರಾಣಾಭರಣವೆಂಬ ಕಾವ್ಯದ ಆದಿಯಲ್ಲಿ 'ವಿದ್ವಾಂಸರು ಎರಡನೆಯವರ ಕಾವ್ಯವನ್ನು ಶ್ಲಾಘಿಸುವದರಲ್ಲಿ ಮೂಕವ್ರತವನ್ನು ಧಾರಣ ಮಾಡಿರಲು, ಅರಸರು ಲಕ್ಷ್ಮೀ ವಿಲಾಸ ಮದದಿಂದ, ಕಣ್ಣು ಮುಚ್ಚಿಕೊಂಡಿರಲು, ಸ್ವರ್ಗಾಂಗನೆಯರ ಅಧರದ ಮಾಧುರ್ಯವನ್ನು ಧಿಕ್ಕರಿಸಿದ ನನ್ನ ವಾಗ್ವಿಲಾಸವು ಯಾರ ಮುಖದಲ್ಲಿ ತನ್ನ ಕುಣಿತ ವನ್ನು ಮಾಡಬೇಕು !' ಎಂದು ಉದ್ಗಾರ ತೆಗೆದಿದ್ದಾನೆ ಇದೇ ಕಾವ್ಯದ ಅಂತ್ಯದಲ್ಲಿ ಶ್ರೀಮತ್ಪಂಡಿತರಾಜ ಪಂಡಿತ ಜಗನ್ನಾಥೋ ವ್ಯಧಾಸೀದಿದಂ, ಎಂದು ಅಂದಿದ್ದಾರೆ ಪಂಡಿತರಾಜ ಪಂಡಿತ ಜಗನ್ನಾಧ ಪಂಡಿತ ! ! !

ಪಂಡಿತರಾಜನಿಂದ ವಿರಚಿತವಾದ ಅಸಫವಿಲಾಸವೆಂಬ ಪ್ರಬಂಧದ ಉಪೋದ್ಘಾತ ದಲ್ಲಿರುವ ಗದ್ಯವೂ ಪಂಡಿತರಾಜನ ಅಭಿಮಾನಿ ಸ್ವಭಾವವನ್ನು ವ್ಯಕ್ತಪಡಿಸುವದು

"ಅಥ ಪ್ರತಿದಿನ ಮುದ್ಯದನವದ್ಯಗದ್ಯಪದ್ಯಾದ್ಯನೇಕ ವಿದ್ಯಾದ್ಯೋತಿ ತಾಂತಃಕರಣೈಃ ಕವಿಭಿರುಪಾಸ್ಯಮಾನೇನ, ಕೃತಯುಗೀಕೃತಕಲಿಕಾಲೇನ, ಕುಮತಿ ತೃಣಜಾಲ ಸಮಾಚ್ಛಾದಿತ ವೇದವನಮಾರ್ಗವಿಲೋಕನಾಯ ಸಮುದ್ದೀಪಿತ ಸುತರ್ಕ ದಹನ ಜ್ವಾಲಾಜಾಲೇನ ಸಾರ್ವಭೌಮ ಶ್ರೀಶಹಾಜಹಾಂ ಪ್ರಸಾ ದಾದಧಿಗತ ಪಂಡಿತರಾಜಪದವೀವಿರಾಜಿತೇನ, ತೈಲಂಗಕುಲಾವತಂಸೇನ, ಪಂಡಿತರಾಜ ಜಗನ್ನಾಥೇನಾಸಫವಿಲಾಸಾಖ್ಯೇಯಮಾಖ್ಯಾಯಿಕಾನಿರಮಿಾಯತ "

ಮಮ್ಮಭಟ್ಟ, ಅಪ್ಪಯ್ಯದೀಕ್ಷಿತ ಮೊದಲಾದ ಆಲಂಕಾರಿಕರು ಅಲಂಕಾರಗಳ ಲಕ್ಷಣಗಳನ್ನು ಹೇಳಿ, ಉದಾಹರಣ ಕೊಡುವಾಗ ಪರಕೀಯರ ಶ್ಲೋಕಗಳನ್ನು ತೆಗೆದು ಕೊಂಡಿರುವರಷ್ಟೇ ? ಆದರೆ ಪಂಡಿತರಾಜನು ತಾನು ಪರಕೀಯರ ಶ್ಲೋಕಗಳನ್ನು ಉದಾಹರಣೆಗಾಗಿ ಕೂಡ ತೆಗೆದುಕೊಳ್ಳದೆ ಸ್ವಯಂ ವಿರಚಿತವಾದ ಶ್ಲೋಕಗಳನ್ನೆ ತನ್ನ ರಸಗಂಗಾಧರವೆಂಬ ಅಲಂಕಾರ ಗ್ರಂಥದಲ್ಲಿ ಉದಾಹರಿಸಿದ್ದಾನೆ. ಇದು, ಅವನ ಅಭಿ ಮಾನಿತ್ವವನ್ನೂ ಅಪೂರ್ವ ಕವಿತ್ವಜಾಗೃತಿಯನ್ನೂ ಸ್ಫುಟೀಕರಿಸುವದು ಇದರ ವಿಷಯವಾಗಿ ರಸಗಂಗಾಧರದ ಆರಂಭದಲ್ಲಿ ಅವನು ಅನ್ನುವದೇನಂದರೆ .

ನಿರ್ಮಾಯ ನೂತನಮುದಾಹರಣಾಯ ರೂಪವುಖ್ |
ಕಾವ್ಯಂ ಮಯಾತ್ರ ನಿಹಿತಂ ನಪರಸ್ಯ ಕಿಂಚಿತ್ ||
ಕಿಂ ಸೇವ್ಯತೇ ಸುಮನಸಾಂ ಮನಸಾಪಿ ಗಂಧಃ |
ಕಸ್ತೂರಿಕಾಜನನಶಕ್ತಿಭೃತಾ ಮೃಗೇಣ ||

ನೂತನ ಉದಾಹರಣಕ್ಕೆ ಯೋಗ್ಯವಾದ ಕಾವ್ಯವನ್ನು ನಿರ್ಮಿಸಿ ನಾನಿಲ್ಲಿ ಇಟ್ಟಿ ದ್ದೇನೆ. ಸ್ವಲ್ಪಾದರೂ ಎರಡನೆಯವರ ಕಾವ್ಯವನ್ನು ತೆಗೆದುಕೊಂಡಿಲ್ಲ ಕಸ್ತೂರಿಯನ್ನೇ

ಹುಟ್ಟಿಸುವ ಮೃಗವು ಎಂದಾದರೂ ಮನಸ್ಸಿನಿಂದಾದರೂ ಹೂಗಳ ಸುವಾಸನೆಯನ್ನು ಸೇವಿಸುವದೇ ?

ಜಗನ್ನಾಥ ಪಂಡಿತನ ಗ್ರಂಥದಲ್ಲಿ ಕೇವಲ ಅಭಿಮಾನೋಕ್ತಿಗಳೇ ಕಂಡುಬರುತ್ತವೆಂತಲ್ಲ ಆವನಿಂದ ವಿರಚಿತವಾದ 'ಕರುಣಾಲಹರಿ' 'ಗಂಗಾಲಹರಿ' ಮೊದಲಾದ ಸುಂದರ ಕಾವ್ಯಗಳಲ್ಲಿ ಇವನ ವಿನಯುಪರಿಪೂರಿತ ವಚನಗಳೂ ಕಂಡುಬರುವವು ಅವನ್ನು ಆ ಆ ಗ್ರಂಥಗಳ ಸಮಾಲೋಚನಾವಸರದಲ್ಲಿ ವಿವರಿಸುವೆವು

## ಆಖ್ಯಾಯಿಕೆಗಳು

ಪಂಡಿತರಾಜನ ವಿಷಯವಾಗಿ ಅನೇಕ ಆಖ್ಯಾಯಿಕೆಗಳು ಜನರಲ್ಲಿ ಪ್ರಚಲಿತವಾಗಿರುವವು ಅವುಗಳಲ್ಲಿ ಅತಿ ಪ್ರಥಿತವಾದ ಕಿಂವದಂತಿಯು

ಜಗನ್ನಾಥನ ಅದ್ವಿತೀಯವಾದ ಪಾಂಡಿತ್ಯವನ್ನು ಕೇಳಿ ಸಂತುಷ್ಟನಾಗಿ ದಿಲ್ಲೀಪತಿಯಾದ ಶಹಾಜಹಾನನು ಅವನನ್ನು ತನ್ನ ಸಭಿಕನನ್ನಾಗಿ ಮಾಡಿಕೊಂಡನು. ಜಗನ್ನಾಥನನ್ನು ಬಹಿಷ್ಕರಜೀವಿತನನ್ನಾಗಿಯೇ ಬಗೆದನು ಒಂದು ದಿವಸ ಜಗನ್ನಾಥ ಪಂಡಿತನೊಡನೆ ದಿಲ್ಲೀಶ್ವರನು ಚದುರಂಗವನ್ನಾಡುತ್ತ ಕುಳಿತಿರಲು ನೀರಡಿಕೆಯಿಂದ ವ್ಯಾಕುಲನಾದನು ನೀರನ್ನು ತರುವದಕ್ಕಾಗಿ ಮಗಳಿಗೆ ಆಜ್ಞಾಪಿಸಿದನಂತೆ ಆ ತನ್ವಂಗಿಯು ಕೌಸುಂಭವಸನವನ್ನು ಧರಿಸಿ ನೀರಿನಿಂದ ತುಂಬಿದ ಸುವರ್ಣ ಕುಂಭವನ್ನು ತಲೆಯ ಮೇಲಿಟ್ಟುಕೊಂಡು ಶೃಂಗಾರರಸದೇವತೆಯೇ ಸಂಚರಿಸುತ್ತಾಳೋ ಏನೋ ಎನ್ನುವಂತೆ ಮಂದಮಂದವಾಗಿ ಬಾದಶಹನ ಸಮೀಪಕ್ಕೆ ಬಂದಳು. ಕೊಡವನ್ನು ನೆಲಕ್ಕೆ ಇಳಿಸಲು ದಿಲ್ಲೀಶ್ವರನು ನೀರು ಕುಡಿದು ಸಂತುಷ್ಟನಾದನು ಪುನಃ ಆ ಕನ್ನಿಕೆಯು ಕೊಡವನ್ನು ತಲೆಯ ಮೇಲಿಟ್ಟುಕೊಂಡು ಮನೆಗೆ ಹೋಗಲುಪಕ್ರಮಿಸಿದಳು. ಆಗ ಬಾದಶಹನು ಆ ಕುಮಾರಿಕೆಯನ್ನು ವರ್ಣಿಸಲು ಜಗನ್ನಾಥನಿಗೆ ಆಜ್ಞೆಯನ್ನಿತ್ತನು ಅವನಾದರೂ ಅಪ್ಪಣೆ ಕೊಟ್ಟ ಉತ್ತರ ಕ್ಷಣದಲ್ಲಿಯೇ .

ಇಯಂ ಸುಸ್ತನೀ ಮಸ್ತಕನ್ಯಸ್ತ ಕುಂಭಾ |
ಕುಸುಂಭಾರುಣಂ ಚಾರು ಚೇಲಂ ವಸಾನಾ ||
ಸಮಸ್ತಸ್ಯ ಲೋಕಸ್ಯ ಚೇತಃ ಪ್ರವೃತ್ತಿಮ್ |
ಗೃಹೀತ್ವಾ ಘಟೇ ನ್ಯಸ್ತ ಯಾತೀವ ಭಾತಿ ||

ಬಾದಶಹನೇ ! ಕುಸುಂಬ ಬಣ್ಣದ ಮನೋಹರವಾದ ವಸ್ತ್ರವನ್ನುಟ್ಟುಕೊಂಡ ಈಕೆಯು ತಲೆಯ ಮೇಲೆ ಬರಿದಾದ ಕೊಡವನ್ನು ಹೊತ್ತುಕೊಂಡು ಹೋಗುವದಿಲ್ಲ. ಇಲ್ಲಿದ್ದ ಜನರ ಮನಸ್ಸನ್ನು ಆ ಕೊಡದಲ್ಲಿ ಹಾಕಿಕೊಂಡು ಹೋಗುತ್ತಾಳೆ ! ! !

ತಾತ್ಕಾಲದಲ್ಲಿಯೇ ಜಗನ್ನಾಥ ಪಂಡಿತನ ವದನಾರವಿಂದದಿಂದ ಉದಯವನ್ನು ಹೊಂದಿದ ಸುಲಲಿತ ಪದ್ಯವನ್ನು ಯವನರಾಜನು ಕೇಳಿ ಅತೀವ ಪ್ರಸನ್ನನಾಗಿ,

'ಪಂಡಿತರಾಜನೇ ನಿನ್ನೀ ವಾಗ್ವೈಭವದಿಂದ ಸಂತುಷ್ಟನಾಗಿರುವೆನು ಏನು ಬೇಡುತ್ತೀ ಬೇಡು,' ಎಂದು ಉದ್ಗಾರ ತೆಗೆದನು ಪಂಡಿತನಾದನೂ ಪುನಃ ಶ್ಲೋಕದಿಂದಲೇ ಭೂಪಾಲಕನನ್ನು ಪ್ರಾರ್ಥಿಸಿದನು

ನ ಯಾಚೇ ಗಜಾಲಿಂ ನ ವಾ ವಾಜಿರಾಜಿವ್ |
ನ ವಿತ್ತೇಷು ಚಿತ್ತಂ ಮದೀಯಂ ಕದಾಚಿತ್ ||
ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ |
ಲವಂಗೀ ಕುರಂಗೀದೃಗಂಗೀಕರೋತು ||

ಪಾರ್ಥಿವ ಶಿರೋಮಣಿಯೇ, ನೀನು ಸಾವಿರಾರು ಆನೆಗಳನ್ನು ಕೊಟ್ಟರೂ ನಾನು ಅವುಗಳನ್ನು ಸ್ವೀಕರಿಸಲಾರೆನು ಕುದುರೆಗಳ ಸಮೂಹವನ್ನೇ ಕೊಟ್ಟರೂ ಅವೂ ನನಗೆ ಬೇಡ ದುಡ್ಡಿನಲ್ಲಿ ನನ್ನ ಆಶೆಯಿಲ್ಲ ಈ ಚಾರುವಕ್ಷೋಜಗಳಿಂದ ಶೋಭಿತಳಾದ ಎರಳೆ ಯಂತೆ ನೇತ್ರವುಳ್ಳ ನಿನ್ನ ಲವಂಗಿಯೆಂಬ ಕನ್ನಿಕೆಯು ನನ್ನನ್ನು ವರಿಸಲಿ

ಪಂಡಿತರಾಜನ ಈ ಪ್ರಾರ್ಥನೆಯನ್ನು ಕೇಳಿ ವಿಸ್ಮಿತನಾಗಿ ಮಹೀಪತಿಯು ಮಾತಾಡುತ್ತಾನೆ, 'ಬ್ರಾಹ್ಮಣನಾಗಿ ನೀನು ಸ್ವರ್ಗಲೋಕಕ್ಕೆ ಅಡ್ಡಿಯನ್ನುಂಟು ಮಾಡುವ ಯವನಿಯನ್ನು ಪ್ರಾರ್ಥಿಸಬೇಕೇ ? ! ! !'

ಯವನೀ ನವನೀತ ಕೋಮಲಾಂಗೀ |
ಶಯನೀಯೇ ಯದಿ ಲಭ್ಯತೇ ಕದಾಚಿತ್ ||
ಅವನೀತಲಮೇವ ಸಾಧುಮನ್ಯೇ |
ನ ವನೀ ಮಾಘವನೀ ವಿನೋದಹೇತುಃ ||

ಬೆಣ್ಣೆಯಂತೆ ಮೃದುವಾದ ಅವಯವಗಳುಳ್ಳ ಈ ಯವನಿಯು ಶಯನದಲ್ಲಿ ಒಂದು ವೇಳೆ ಲಬ್ಧಳಾದರೆ ಭೂತಲವೇ ಸುಖಕರವೆಂದು ತಿಳಿಯುವೆನು. ಆ ಇಂದ್ರನ ನಂದನವನವೇನು ನನಗೆ ವಿನೋದವನ್ನುಂಟುಮಾಡಲು ಶಕ್ತವಾಗಲಿಕ್ಕಿಲ್ಲ

ಯವನೀರಮಣೀ ವಿಪದಃ ಶಮನೀ |
ಕಮನೀಯತಮಾ ನವನೀತಸಮಾ ||
'ಊಹಿ ಊಹಿ' ವಚೋಽಮೃತಪೂರ್ಣಮುಖೀ |
ಸ ಸುಖೀ ಜಗತೀಹ ಯದಂಕಗತಾ ||

ಸಂತಾಪವನ್ನು ಕಳೆಯುವ ಮನೋಹರಳಾದ ಈ 'ಊಹಿ ಊಹಿ' ಎಂಬ ವಚನಾಮೃತದಿಂದ ತುಂಬಿದ ಮುಖಕಮಲದಿಂದ ಶೋಭಿತಳಾದ ಈ ಯವನ ರಮ ಣಿಯು ಯಾವನ ತೊಡೆಯಲ್ಲಿ ಬಂದು ಕುಳಿತುಕೊಳ್ಳುವಳೋ, ಅವನು ಜಗತ್ತಿನಲ್ಲಿಯೇ ಧನ್ಯನಲ್ಲವೇ ! ಸ್ವರ್ಗಲೋಕದಲ್ಲಿ ಇದಕ್ಕೂ ಹೆಚ್ಚಿನ ಸುಖವೇನಿರುವದು ?

ಜಗನ್ನಾಥನ ಸರಸವಾದ ವಾಣಿಯನ್ನು ಕೇಳಿ ಮೊದಲಿಗಿಂತ ಹೆಚ್ಚಿಗೆ ಸಂತುಷ್ಟನಾಗಿ ದಿಲ್ಲೀಪತಿಯು ಲವಂಗೀ ಎಂಬ ಹೆಸರುಳ್ಳ ಕನ್ನಿಕೆಯನ್ನು ಪಂಡಿತರಾಜನಿಗೆ ಕೊಟ್ಟು ಮದುವೆಯನ್ನು ಮಾಡಿದನು ಪಂಡಿತರಾಜನಾದರೂ ಸಂಪಾದಿಸತಕ್ಕದ್ದನ್ನು ಸಂಪಾದಿಸಿದೆನೆಂದು ತಿಳಿದು ಆನಂದದಿಂದ ಆ ಯವನಿಯಿಂದ ಕೂಡಿ ಸಂಸಾರಮಾಡುತ್ತ ಸ್ವರ್ಗಸುಖವನ್ನು ತೃಣಕ್ಕೆ ಬಗೆದನು ಕೆಲವು ದಿವಸ ಆಕೆಯೊಡನೆ ಸಂಸಾರ ಮಾಡಿದ ನಂತರ ಪಂಡಿತರಾಜನು ಕಾಶೀಕ್ಷೇತ್ರಕ್ಕೆ ತೆರಳಿದನು ಅಲ್ಲಿದ್ದ ಪಂಡಿತರು ಇವನನ್ನು ಕುಲಗೇಡಿಯೆಂದು ಧಿಕ್ಕರಿಸಿದರು ಕಿಂಚಿದ್ವಿಷಾದವನ್ನು ಹೊಂದಿ ಜಗನ್ನಾಥನು ನನ್ನನ್ನೂ ನನ್ನೀ ಪ್ರೇಯಸಿಯಾದ ಯವನಿಯನ್ನೂ ನೀವು ಪವಿತ್ರೀಕರಿಸಿ ಬ್ರಾಹ್ಮಣರಿಂದ ಕೂಡಿ ವ್ಯವಹಾರ ಮಾಡಲು ಒಡಂಬಟ್ಟರೆ ಪ್ರಾಯಶ್ಚಿತ್ತವನ್ನು ಅಂಗೀಕರಿಸುವೆನೆಂದು ಹೇಳಿದನು ಕಾಶೀವಾಸಿಗಳಾದ ವಿಪ್ರಾಗ್ರಣಿಗಳು ಈ ಮಾತಿಗೆ ಒಡಂಬಡಲಿಲ್ಲ ಅಲ್ಲಿಂದ ಜಗನ್ನಾಥನು– ಬಿಡಿರಿ, ನಿಮ್ಮ ಪ್ರಾಯಶ್ಚಿತ್ತದಿಂದ ಆಗತಕ್ಕದ್ದಾದರೂ ಏನು ? ಜಗತ್ಪಾವನೆಯಾದ ಭಾಗೀರಥಿಯೇ ನನ್ನನ್ನು ಭಾರ್ಯೆಯೊಡನೆ ಪವಿತ್ರಗೊಳಿಸುವಳು, ಎಂದು ನಿಶ್ಚಯವಾಗಿ ಉದ್ಘೋಷಿಸಿ ಗಂಗಾತೀರಕ್ಕೆ ಬಂದನು. ಅಲ್ಲಿ ಐವತ್ತೆರಡು ಪಾವಟಿಗೆಗಳುಳ್ಳ ಒಂದು ಘಟ್ಟವನ್ನೇರಿ ಸುಲಲಿತ ಪದಬಂಧನದಿಂದ ಶೋಭಿಸುವ ಕೆಲವು ಪದ್ಯಗಳನ್ನು ರಚಿಸಿ ಅನ್ನತೊಡಗಿದನು. ಆ ಪದ್ಯಗಳುಳ್ಳ ಪ್ರಬಂಧವೇ ಈಗ 'ಪೀಯೂಷಲಹರಿ' ಯೆಂದೂ 'ಗಂಗಾಲಹರಿ' ಯೆಂದೂ ಪ್ರಸಿದ್ಧವಾಗಿರುವದು. ಒಂದೊಂದು ಪದ್ಯವು ಅನ್ನಲ್ಪಡಲು ಒಂದೊಂದು ಪಾವಟಿಗೆಯನ್ನು ಗಂಗೆಯು ಏರಿ ಬಂದಳಂತೆ. ಕಡೆಯ ಪದ್ಯಕ್ಕೆ ಕಡೆಯ ಪಾವಟಿಗೆಯನ್ನು ಏರಿ ಪಂಡಿತರಾಜನನ್ನು ಅವನ ಹೆಂಡತಿಯೊಡನೆ ತನ್ನ ಅಂಗಗಳಲ್ಲಿ ಸೇರಿಸಿಕೊಂಡು ಭಗವತೀ ಭಾಗೀರಥಿಯು ಉದ್ಧಾರ ಮಾಡಿದಳಂತೆ. ಇದನ್ನು ನೋಡಿ ಕಾಶಿಯ ಪಂಡಿತರು ಅತ್ಯಂತವಾಗಿ ಆಶ್ಚರ್ಯಚಕಿತರಾದರು

ಕೆಲವರು "ಯವನಿಯು ಮೊದಲೇ ಮರಣವನ್ನು ಹೊಂದಲು ಆಕೆಯ ವಿರಹದಿಂದ ಸಂತಪ್ತಾಂತರಂಗನಾಗಿ ಜಗನ್ನಾಥನು ದಿಲ್ಲಿಯನ್ನು ಬಿಟ್ಟು ವಾರಾಣಸಿಯನ್ನು ಕುರಿತು ಬರಲು, ಅಲ್ಲಿಯ ಪಂಡಿತರು, ಇವನ ಆಚರಣವನ್ನು ಕೇಳಿ ಇವನನ್ನು ತಿರಸ್ಕರಿಸಿದರು ಅವರ ತಿರಸ್ಕಾರದಿಂದಲೂ ಯವನಿಯ ವಿರಹದಿಂದಲೂ ದುಃಖಿತನಾದ ಪಂಡಿತರಾಜನು ಎಲ್ಲಿಯೂ ಸೌಖ್ಯವನ್ನು ಕಾಣದೆ ಮಳೆಗಾಲದಲ್ಲಿ ಗಂಗೆಯು ತುಂಬಿ ಹರಿಯುತ್ತಿರಲು ಸ್ವಕೃತವಾದ ಗಂಗಾಲಹರಿಯನ್ನು ಪಠಿಸುತ್ತ ಗಂಗೆಯಲ್ಲಿ ಮುಳುಗಿ ಪ್ರಾಣವನ್ನು ಬಿಟ್ಟನು" ಎಂದು ಹೇಳುವರು.

ಈ ಆಖ್ಯಾಯಿಕೆಯ ಸತ್ಯತೆಯ ವಿಷಯದಲ್ಲಿ ಆಕ್ಷೇಪಗಳು ಸ್ವಭಾವತಃ ಕ್ರೋಧವಂತರಾದ ಯವನರು ಸ್ವಾಂಗನೆಯರಲ್ಲಿ ಪರಪುರುಷನ ಪ್ರೇಮನಿಧಾನವನ್ನು ಕೇಳಿದರೆ ಸಂತಪ್ತರಾಗುವರು. ಅದು ಅವರಿಗೆ ಸಹನವಾಗುವದಿಲ್ಲ ಇಂಥವರು ತಮ್ಮ ಪ್ರತ್ಯಕ್ಷವಾಗಿ ಕಾಮಾವಿಷ್ಟನಾದ ಪರಮೇಷ್ಠಿಯ ಮನುಷ್ಯನಿಂದ ಮಾಡಲ್ಪಟ್ಟ ತಮ್ಮ

ಕನ್ಯೆಯ ವಿಷಯವಾಗಿ ಪ್ರಾರ್ಥನೆಯನ್ನು ಸಹಿಸುವರೇ ? ಪಂಡಿತರು ಎಷ್ಟೋ ಅಹಂಕಾರಶಾಲಿಗಳಾಗಿದ್ದರೂ ಕಾಮಮಾತ್ರಾಸಕ್ತಿಯಿಂದ ಧರ್ಮವನ್ನು ಉಲ್ಲಂಘಿಸಲು ಇಚ್ಛಿಸುವದು ಅಶಕ್ಯವು ಕ್ಷುದ್ರತಮನಾದ ಯವನನಾದರೂ ವಿಧರ್ಮೀಯರಿಂದ ಮಾಡಲ್ಪಟ್ಟ ತನ್ನ ಕಾಂತಾಗತ ಕಥೆಯನ್ನು ಕೇಳಿದರೆ ಕೂಡ ಕೋಪದ ಪರಾಕಾಷ್ಠೆಯನ್ನು ಏರುತ್ತಿರಲು ನಿಖಿಲ ಭಾರತವರ್ಷೀಯ ಭೂಪಾಲಕರಿಂದ ಸಮಭ್ಯರ್ಚಿತ ಶಾಸನನಾದ ದಿಲ್ಲೀಶ್ವರನು, ಜಗನ್ನಾಥನು ಪಂಡಿತನೇ ಯಾಕಾಗಲೊಲ್ಲನು, ಅವನಿಂದ ತನ್ನ ಸಮಕ್ಷದಲ್ಲಿ ಅಭ್ಯರ್ಥಿತಳಾದ ಕನ್ಯೆಯನ್ನು ಅವನಿಗೆ ಕೊಟ್ಟು ಯವನಧರ್ಮವನ್ನು ಧಿಕ್ಕರಿಸಲು ಒಡಂಬಡುವನೇ ? 'ಯವನೀನವನೀತ ಕೋಮಲಾಂಗೀಶಯನೀಯೇ,' ಮೊದಲಾದ ಶ್ಲೋಕಗಳು ನಿಜವಾಗಿ ಪಂಡಿತರಾಜನವೇ ಆಗಿದ್ದರೆ ಅವನು ತನ್ನ ಭಾಮಿನೀವಿಲಾಸವೆಂಬ ಪೆಟ್ಟಿಗೆಯಲ್ಲಿ ಆ ಪದ್ಯಗಳನ್ನು ಹಾಕಿಡುತ್ತಿದ್ದನು. ಯಾಕಂದರೆ ಅವನು ಭಾಮಿನೀವಿಲಾಸದ ಕಡೆಯಲ್ಲಿ ಅನ್ನುವುದೇನಂದರೆ.

> ದುರ್ವೃತ್ತಾ ಜಾರಜನ್ಮಾನೋ ಹರಿಷ್ಯಂತೀತಿ ಶಂಕಯಾ |
> ಮದೀಯಪದ್ಯರತ್ನಾನಾಂ ಮಂಜೂಷೈಷಾ ಕೃತಾ ಮಯಾ ||

ತುಡಗ ಸೂಳೆಮಕ್ಕಳು ನನ್ನ ಪದ್ಯಗಳನ್ನು ಹರಣ ಮಾಡಿಯಾರು ಎಂಬ ಶಂಕೆಯಿಂದ ನಾನು ಭಾಮಿನೀವಿಲಾಸವೆಂಬ ಪೆಟ್ಟಿಗೆಯಲ್ಲಿ ಪದ್ಯರತ್ನಗಳನ್ನು ಸಂಗ್ರಹಿಸಿ ಇಟ್ಟಿರುವೆನು ಮೇಲಿನ ಯವನೀಸಂಬಂಧದ ಶ್ಲೋಕಗಳನ್ನು ಈ ಪೆಟ್ಟಿಗೆಯಲ್ಲಿ ಸಂಗ್ರಹಿಸಲು ಪಂಡಿತರಾಜನು ಮರೆತನೋ ? ಇದನ್ನು ವಿದ್ವಜ್ಜನರು ಅವಶ್ಯವಾಗಿ ವಿಚಾರಿಸತಕ್ಕದ್ದು. ಸಾರ್ವಭೌಮನಾದ ದಿಲ್ಲೀಶ್ವರನು ಸಭೆಯಲ್ಲಿ ಏಕೆ ನೀರು ಕುಡಿದನು ? ಆ ಸಾರ್ವಭೌಮ ಪುತ್ರಿಯು ಬಡಹೆಂಗಸಿನಂತೆ ತಲೆಯ ಮೇಲೆ ಕೊಡವನ್ನಿಟ್ಟುಕೊಂಡು ಬಂದಳೇ ? ಆಳುಗಳಿದ್ದಿಲ್ಲವೇ ? 'ಸುಸ್ತನೀ' ಎಂಬ ವಿಶೇಷಣಕ್ಕೆ ಅರ್ಹರಾದ ಆ ಅಸೂರ್ಯಂಪಶ್ಯರಾದ ಯವನ ತರುಣಿಯರು ಪರಪುರುಷಪರಿವೃತವಾದ ಸಭೆಯಲ್ಲಿ ನೀರು ತರುವದೆಂದರೇನು ?

ಭಗವತಿಯಾದ ಭಾಗೀರಥಿಯ ಅಂಗಗಳಲ್ಲಿ ಜಗನ್ನಾಥನು ವಿಲಯವನ್ನು ಹೊಂದಿದನು. ಯಾವ ಪಂಡಿತರಾಜನ ಸ್ತುತಿಯಿಂದ ದೇವನದಿಯು ಸಂತುಷ್ಟೆಯಾದಳೋ ಆ ಸ್ತುತಿಗ್ರಂಥವೀಗ 'ಗಂಗಾಲಹರಿ'ಯೆಂದು ಪ್ರಸಿದ್ಧವಾಗಿದೆಯಷ್ಟೇ ?

ಒಂದು ವೇಳೆ ಮೇಲೆ ನಿರ್ದಿಷ್ಟವಾದ ಲೋಕವಾರ್ತೆಯು ದಿಟವಾದರೆ ಗಂಗಾಲಹರಿಯ ಪ್ರಣಯನ ಕಾಲದಲ್ಲಿಯೇ ಜಗನ್ನಾಥನ ಆಯುಷ್ಯದ ಸಮಾಪ್ತಿಯಾಯಿತೆಂಬುದು ಸ್ಪಷ್ಟವು. ಅಂದ ಮೇಲೆ ಗಂಗಾಲಹರಿಯನ್ನು ರಚಿಸಿದ ನಂತರ ಯಾವ ಗ್ರಂಥವನ್ನೂ ರಚಿಸಲಿಲ್ಲವೆಂಬಂತಾಯಿತು. ಅರ್ಥಾತ್ ಜಗನ್ನಾಥವಿರಚಿತವಾದ ಪ್ರಬಂಧಾಂತರಗಳಲ್ಲಿ ಗಂಗಾಲಹರೀಗತವಾದ ಪದ್ಯಗಳು ದೃಗ್ಗೋಚರಿಸಬಾರದು. ಆದರೆ ಗಂಗಾಲಹರಿಯಲ್ಲಿದ್ದ ಪದ್ಯಗಳು ಅವನ ಎರಡನೇ ಗ್ರಂಥಗಳಲ್ಲಿ ಕಂಡುಬರುವವು ಆದುದರಿಂದ

ಗಂಗಾಲಹರೀ ಪ್ರಣಯನದ ಅವಸಾನದಲ್ಲಿ ಜಗನ್ನಾಥರ ಆಯುಷ್ಯದ ಪರಿಸಮಾಪ್ತಿ ಯಾಯಿತೆಂಬ ವಚನವು ಸಟಿಯಾಪದ್ದು. ಗಂಗಾಲಹರೀಭಿನ್ನವಾದ ಜಗನ್ನಾಥ ರಚಿತ ವಾದ ಮಂದಾಕಿನೀಸ್ತುತಿ ಗ್ರಂಥವಿದ್ದರೆ ಆದರ ಅವಸಾನ ಸಮಯದಲ್ಲಿ ಪಂಡಿತನ ನಿಧನಾವಸರವೆಂದು ತಿಳಿಯುವೆವು. ಹಾಗೂ ಇಲ್ಲ. ಅಂದ ಬಳಿಕ ಮೇಲಿನ ಲೋಕ ವಾರ್ತೆಯು ಸಟಿಯೋ ದಿಟವೋ ವಿದ್ವಾಂಸರು ವಿಮರ್ಶಿಸಬೇಕು.

ಗಂಗಾಲಹರಿಯಲ್ಲಿದ್ದ ಪದ್ಯಗಳು ರಸಗಂಗಾಧರದಲ್ಲಿ ಕಂಡುಬರುವವು.

ವಿಧತ್ತಾಂ ನಿಶ್ಶಂಕಂ ನಿರವಧಿ ಸಮಾಧಿಂ ವಿಧಿರಹೋ |
ಸುಖಂ ಶೇಷೇ ಶೇತಾಂ ಹರಿರವಿರತಂ ನೃತ್ಯತು ಹರಃ |
ಕೃತಂ ಪ್ರಾಯಶ್ಚಿತ್ತೈರಲಮಥ ತಪೋದಾನವಿಭವೈಃ |
ಸವಿತ್ರೀ ಕಾಮಾನಾಂ ಯದಿ ಜಗತಿ ಜಾಗರ್ತಿ ಭವತೀ ||

ಓ ಮಾತಃ ಗಂಗೇ, ಬ್ರಹ್ಮನು ನಿರಂತರ ಸಮಾಧಿಯಲ್ಲಿ ನಿರ್ವಿಶಂಕವಾಗಿ ಕುಳಿತು ಕೊಳ್ಳಲಿ, ವಿಷ್ಣು ಸುಖವಾಗಿ ಮಹಾಶೇಷನಲ್ಲಿ ಮಲಗಿಕೊಳ್ಳಲಿ, ಆ ಮಹಾರಾಯ ಮಹಾದೇವನು ಯಥೇಷ್ಟವಾಗಿ ತನ್ನ ತಾಂಡವವನ್ನು ಮಾಡುತ್ತಿರಲಿ. ಆ ಪ್ರಾಯಶ್ಚಿತ್ತ ಗಳು ಸಾಕು, ಆ ತಪಸ್ಸು ಆದಾನ ಇವುಗಳ ವೈಭವವು ಸಾಕು. ಸಕಲ ಕಾಮನೆಗಳನ್ನು ಪೂರೈಸುವ ನೀನೊಬ್ಬಳು, ಈ ಜಗತ್ತಿನಲ್ಲಿ ಜಾಗ್ರತೆಯಾಗಿದ್ದರೆ ಸಾಕು !!!

ಗಂಗಾಲಹರಿಯಲ್ಲಿದ್ದ ಈ ಪದ್ಯವು ರಸಗಂಗಾಧರದಲ್ಲಿ ಮಾಧುರ್ಯದ ಉದಾ ಹರಣವಾಗಿರುವದು.

ಕೃತಕ್ಷುದ್ರಾಘೌಘಾನಥ ಸಪದಿ ಸಂತಪ್ತಮನಸಃ |
ಸಮುದ್ಧರ್ತುಂ ಸಂತು ತ್ರಿಭುವನತಲೀ ತೀರ್ಥನಿವಹಾಃ ||
ಅಪಿ ಪ್ರಾಯಶ್ಚಿತ್ತಪ್ರಸರಣಪಥಾತೀತಚರಿತಾನ್ |
ನರಾನೂರೀಕರ್ತುಂ ತ್ವಮಿವ ಜನನಿ ತ್ವಂ ವಿಜಯಸೇ ||

ಎಲೌ ಮಂದಾಕಿನೀ ! ಸಣ್ಣ ಸಣ್ಣ ಪಾಪಗಳನ್ನು ಮಾಡಿ ಸಂತಪ್ತರಾದ ಜನ ರನ್ನು ಉದ್ಧರಿಸುವದಕ್ಕಾಗಿ ಭುವನದಲ್ಲಿ ಎಷ್ಟೋ ತೀರ್ಥಗಳು ಇರುವವು. ಆದರೆ ಪ್ರಾಯಶ್ಚಿತ್ತದಿಂದ ಕೂಡ ಯಾವ ಪಾಪವು ತೊಳೆದು ಹೋಗುವದಿಲ್ಲವೋ ಅಂತಹ ಮಹತ್ತರವಾದ ಪಾಪವನ್ನು ಮಾಡಿದ ಜನರನ್ನು ಉದ್ಧರಿಸಲಿಕ್ಕೆ ನಿನ್ನ ಹಾಗೆ ನೀನೇ ಶೋಭಿಸುವಿ.

ಅನನ್ವಯಾಲಂಕಾರ ಪ್ರಕರಣದಲ್ಲಿ ಈ ಶ್ಲೋಕವು ಕಂಗೊಳಿಸುವದು. ಇದೇ ಮೇರೆಗೆ ಜಗನ್ನಾಥನು ಭಾವೋದಾಹರಣ ಪ್ರಸಂಗದಿಂದ ರಸಗಂಗಾಧರದಲ್ಲಿ ಹೇಳಿರುವ ದೇನಂದರೆ "ಮನ್ನಿರ್ಮಿತಾಸ್ವ ಪಂಚಲಹರ್ಯೋ ಭಾವಸ್ಯ" ಜಗನ್ನಾಥನಿಂದ ನಿರಚಿತ ವಾದ ಐದು ಲಹರಿಗಳೆಂದರೆ 'ಪೀಯೂಷ (ಗಂಗಾ) ಲಹರಿ', 'ಸುಧಾಲಹರಿ', 'ಲಕ್ಷ್ಮೀ

ಲಹರಿ', 'ಅಮೃತಲಹರಿ', 'ಕರುಣಾಲಹರಿ' ಇವುಗಳು ಜಗನ್ನಾಥನಿಂದ ವಿರಚಿತವಾದ ಗಂಗಾಲಹರಿಯು ಐದು ಲಹರಿಗಳಲ್ಲಿಯೇ ಅಂತರ್ಭೂತವಾಗುತ್ತದೆ ಲಹರೀ ಪಂಚಕವು ರಸಗಂಗಾಧರದಲ್ಲಿ ಉಲ್ಲಿಖಿತವಾಗಿರುವದರಿಂದ ಗಂಗಾಲಹರಿಯಲ್ಲಿರುವ ಪದ್ಯಗಳು ರಸಗಂಗಾಧರದಲ್ಲಿ ಕಂಡುಬರುವದರಿಂದ ರಸಗಂಗಾಧರ ನಿರ್ಮಾಣವಾಗುವದಕ್ಕಿಂತ ಮೊದಲೇ ಗಂಗಾಲಹರಿಯು ನಿರ್ಮಿಸಲ್ಪಟ್ಟಿರುತ್ತದೆಂಬುದು ಸ್ಫುಟವಾಗಿ ಕಂಡುಬರುವದು ಆದುದರಿಂದ ತತ್ಕಾಲದಲ್ಲಿ ನಿರ್ಮಿತ ಗಂಗಾಲಹರಿಯನ್ನು ಕೇಳಿ ಸಂತುಷ್ಟಳಾದ ಗಂಗೆ ತನ್ನ ಕ್ರೋಡದಲ್ಲಿ ಜಗನ್ನಾಥನನ್ನು ವಿಲೀನನ್ನಾಗಿ ಮಾಡಿಕೊಂಡಳೆಂಬ ಜನವಾರ್ತೆಯು ಸಟೆಯಾದದ್ದೇ.

ಪಂಡಿತರಾಜನ ವಿಷಯವಾದ ಎರಡನೇ ಲೋಕಪ್ರವಾದವು— ಪಂಡಿತರಾಜನು ದಿಲ್ಲೀವಲ್ಲಭನ ಪಾರ್ಶ್ವಮಂಡಲವನ್ನಲಂಕರಿಸಲು ಲಲಿತವೂ, ಮಧುರವೂ, ಪ್ರಸನ್ನವೂ ಆದ ಪದಗಳ ವಿನ್ಯಾಸದಿಂದ ಹೃದಯಂಗಮವಾದ ಪದ್ಯಗಳಿಂದ ದಿಲ್ಲೀಶ್ವರನ ಚಿತ್ತವನ್ನು ಆನಂದಪಡಿಸುತ್ತಿರಲು ಒಂದು ದಿವಸ ಒಬ್ಬ ಮಾಂಡಲಿಕ ಅರಸನು ಅಲ್ಲಿಗೆ ಬಂದನು ಪಂಡಿತರಾಜನ ಅಲೌಕಿಕ ಪಾಂಡಿತ್ಯವನ್ನೂ ಅಸಾಮಾನ್ಯ ಕವಿತ್ವವನ್ನೂ ನೋಡಿ ವಿಸ್ಮಿತನಾದನು. ಇಂತಹ ಪಂಡಿತನೊಬ್ಬನು ತನ್ನ ಆಶ್ರಯದಲ್ಲಿರುವದು ಒಳ್ಳೆಯದೆಂದು ಭಾವಿಸಿ ಪಂಡಿತರಾಜನ ಎಡೆಗೆ ಬಂದು ಆದರದಿಂದ ಅನುರಾಗದಿಂದ ವಿಜ್ಞಾಪಿಸಿದನು— "ಪಂಡಿತರಾಜನೇ ! ನಿನ್ನ ದರ್ಶನದಿಂದ ಈ ಹೊತ್ತು ಧನ್ಯನಾದೆನು ನನ್ನ ಜನ್ಮದ ಸಾಫಲ್ಯವಾಯಿತು ಸುಕೃತದಿಂದ ದೊರೆಯತಕ್ಕ ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರನಾದೆನು ಪೂಜ್ಯನೇ ! ಇದರಂತೆ ಸರ್ವಕಾಲದಲ್ಲಿಯೂ ನೀನು ಸಹವಾಸದಿಂದ ನನ್ನನ್ನು ಪವಿತ್ರಗೊಳಿಸಬೇಕೆಂದು ಇಚ್ಛಿಸುವೆನು. ಆದುದರಿಂದ ನನ್ನ ಪ್ರಣಯವನ್ನು ವಿಫಲಗೊಳಿಸಬೇಡ ಆರ್ಯಕುಲಸಂಭೂತನಾದ ನೀನು ಅನಾರ್ಯಕುಲೋತ್ಪನ್ನನಾದ ನನ್ನ ಸಹವಾಸವನ್ನು ಧಿಕ್ಕರಿಸಬೇಡ ನಾನು ಸಾಮಂತನೆಂದು ಅನಾದರ ಪಡಬೇಡ. ನಿನ್ನ ಪರಿಚರ್ಯೆಯಲ್ಲಿ ಉತ್ಸುಕನಾದ ನನ್ನ ಮನೋರಥವನ್ನು ಪೂರ್ಣ ಮಾಡು, ಸೆರಗೊಡ್ಡಿ ಬೇಡಿಕೊಳ್ಳುವೆನು "

ಇದನ್ನು ಕೇಳಿ ಪಂಡಿತರಾಜನು ಮುಗುಳುನಗೆಯಿಂದ ನಕ್ಕು ಮಾತನಾಡುತ್ತಾನೆ.

ದಿಲ್ಲೀಶ್ವರೋ ವಾ ಜಗದೀಶ್ವರೋ ವಾ ಮನೋರಥಾನ್ ಪೂರಯಿತುಂ ಸಮರ್ಥಃ ||
ಅನ್ಯೈರ್ನೃಪಾಲೈಃ ಕಿಮುದೀಯಮಾನಂ ಶಾಕಾಯ ವಾ ಸ್ಯಾಲ್ಲವಣಾಯ ವಾ
ಸ್ಯಾತ್ ||

ದಿಲ್ಲೀಶ್ವರನು ಅಥವಾ ಜಗದೀಶ್ವರನು ( ದೇವರು ) ನನ್ನ ಮನೋರಥವನ್ನು ಪೂರ್ಣ ಮಾಡಲು ಸಮರ್ಥನಾಗುವನು. ಉಳಿದ ಅರಸುಗಿರಸುಗಳು ಕೊಡುವರೇನು, ಅದರಿಂದ ಆಗುವದಾದರೂ ಏನು ? ಅವರು ಕೊಟ್ಟದ್ದು ಉಪ್ಪಿಗೆ ಅಥವಾ ಪಲ್ಯಕ್ಕೆ ಸಾಕಾದರೆ ಸಾಕಾದೀತು !!!

ಈ ಲೋಕಪ್ರವಾದವೂ ಓಟವಾದದ್ದೆಂದು ನಿರ್ಣಯಿಸಲು ಅನ್ಯಪ್ರಮಾಣಗಳಿಲ್ಲ ದಿಟವಾದರೂ ದಿಲ್ಲೀಶ್ವರನ ಪಾರ್ಶ್ವವರ್ತಿಯು ಜಗನ್ನಾಥನು ಎಂಬ ಮಾತನ್ನೇ ಸಿದ್ಧಪಡಿಸುವದು ಅದು ಪ್ರಮಾಣಾಂತರಗಳಿಂದ ಸಾಧಿತವಾಗಿಯೇ ಇರುವದು

ಜಗನ್ನಾಥನ ವೈದುಷ್ಯವು ದೇವೀ ಪ್ರಸಾದದಿಂದ ಸುಸಿದ್ಧವಾದದ್ದೆಂದು ಒಂದು ಕಿಂವದಂತಿಯುಂಟು ಮೊದಲು ಗುರುಗಳ ಸಮೀಪದಲ್ಲಿ ವಿವಿಧ ಶಾಸ್ತ್ರಗಳನ್ನು ಕಲಿಯಲು ಉಪಕ್ರಮಿಸಿ ಜಗನ್ನಾಥನು ತನ್ನ ಸಹಾಧ್ಯಾಯಿಗಳ ಬುದ್ಧಿಯ ಜಾಜ್ವಲ್ಯತೆಯನ್ನು ಕಂಡು ವಿಷಾದಪಟ್ಟನು ನಾನು ಮಂದಬುದ್ಧಿಯಾಗಿರುವೆನಲ್ಲ! ಏನು ಮಾಡಿದರೆ ಇವರಿಗಿಂತ ಮೇಲಾದೇನು, ಎಂದು ಚಿಂತಿಸಿ ದೇವತೆಯನ್ನು ಶರಣು ಹೋಗುವದೇ ನೆಟ್ಟಗೆಂದು ತಿಳಿದು ಅಡವಿಗೆ ಹೋಗಿ ಮಹಾಕಾಲಿಯನ್ನು ಅರ್ಚಿಸಿದನು ಅನೇಕ ವಿಧವಾದ ತಪಶ್ಚರ್ಯವನ್ನು ಮಾಡಿದನು ಭಗವತಿಯು ಪ್ರಸನ್ನೆಯಾದಳು. "ವತ್ಸಾ! ನಿನ್ನ ಅನನ್ಯಸುಲಭವಾದ ತಪಶ್ಚರ್ಯದಿಂದ ಸಂತುಷ್ಟೆಯಾಗಿರುವನು. ಏನು ವರವನ್ನು ಬೇಡುತ್ತೀ ಬೇಡು" ಹೀಗೆ ಪ್ರತ್ಯಕ್ಷಳಾಗಿ ಜಗನ್ನಾಥನೊಡನೆ ಮಾತನಾಡಿದಳು. ಜಗನ್ನಾಥನಾದರೂ ಪುಲಕಿತಶರೀರಯಷ್ಟಿಯಾಗಿ ಆನಂದಬಾಷ್ಪಪರಿಪೂರಿತಲೋಚನನಾಗಿ ಆನಂದರಸಮಯಮಾನಸನಾಗಿ ಭಗವತಿಯನ್ನು ಸಹಸ್ರಶಃ ನಮಸ್ಕರಿಸಿ ಚಂದನಾದ್ಯುಪಚಾರಗಳಿಂದ ಆಕೆಯನ್ನು ಪೂಜಿಸಿ ತನ್ನ ಸವಿಸ್ತರ ವೃತ್ತಾಂತವನ್ನೆಲ್ಲ ಆಕೆಗೆ ಹೇಳಿದನು ಆಗ ದೇವಿಯು ಈ ಪದ್ಯವನ್ನು ಅಂದಳು :

ಆಕುರು ದೇಶಂ ವಿಚರೇರ್ಮಾಕುರುಪರವಾದಿನಿರ್ಜಯೇ ಶಂಕಾಂ |
ಸ್ವೀಕುರು ವರಮೇಕಂ ಮೇ ವ್ಯಾಕುರು ಭೋ ವತ್ಸ ಶಾಸ್ತ್ರಾಣಿ ||

ಮಗುವೇ! ನನ್ನ ವರವನ್ನು ಸ್ವೀಕರಿಸು ನಿನ್ನ ಸ್ವದೇಶಕ್ಕೆ ತೆರಳು (?) ಪರವಾದಿಗಳನ್ನು ಗೆಲ್ಲುವದರಲ್ಲಿ ಶಂಕಿಸಬೇಡ ಶಾಸ್ತ್ರಗಳನ್ನು ಪ್ರಕಟಗೊಳಿಸು.

ಹೀಗೆ ಮಾತನಾಡಿ ಭಗವತಿಯು ಅಂತರ್ಧಾನವನ್ನು ಹೊಂದಿದಳು ಜಗನ್ನಾಥನಾದರೂ ತತ್ಕಾಲದಲ್ಲಿ ಸಮುದ್ದೀಪ್ತಪ್ರತಿಭನಾಗಿ ಸ್ವಸ್ಥಾನಕ್ಕೆ ತೆರಳಿ ಬಂದು ತನ್ನ ಸಹಾಧ್ಯಾಯಿಗಳನ್ನು ವಾದದಲ್ಲಿ ಗೆದ್ದನು ಶಾಸ್ತ್ರಗಳನ್ನು ವ್ಯಾಕರಿಸಿದನು. ಈ ಆಖ್ಯಾಯಿಕೆಯ ವಿಷಯವಾಗಿ ಅಭಿಜ್ಞರ ಆಕ್ಷೇಪಗಳು . ಕಾಲಿಯು ನಿಜವಾಗಿ ಪ್ರಸನ್ನಳೇ ಆಗಿದ್ದರೆ ಜಗನ್ನಾಥನು ತನ್ನ ದಾರಿದ್ರ್ಯವನ್ನು ಹೋಗಲಾಡಿಸೆಂದು ಆಕೆಯನ್ನು ಏಕೆ ಬೇಡಿಕೊಳ್ಳಲಿಲ್ಲ ? ವೈದಿಕರ ಆಚಾರಕ್ಕೆ ವಿರೋಧಕರವಾದ ಮ್ಲೇಚ್ಛಭೂಪತಿಯ ಸೇವೆಯನ್ನು ಏಕೆ ಅಂಗೀಕರಿಸಿದನು ? ಹರದೀಕ್ಷಿತರನ್ನು ಸೋಲಿಸುವಾಗ್ಗೆ ಕಾಲಿಯ ಪ್ರಸಾದವಿದ್ದಿದ್ದಿಲ್ಲವೋ ? ಆ ಮಂತ್ರಸಂಸ್ಕೃತವಾದ ಅಂಗಿಯನ್ನೇಕೆ ತೊಟ್ಟುಕೊಂಡನು. ದೇವಿಯು ಪರವಾದಿಜಯದಲ್ಲಿ ಎಳ್ಳಷ್ಟಾದರೂ ಶಂಕೆ ಬೇಡ ಎಂದು ಹೇಳಿದ್ದಳಲ್ಲ.

ಮುಂದಿನ ಆಖ್ಯಾಯಿಕೆಯೋ ಹರದೀಕ್ಷಿತರದು.

## ಮತ್ತೊಂದು ಆಖ್ಯಾಯಿಕೆಯು

ನಾನು ವಿಧವಾದ ಕವಿತ್ವದಿಂದ ದಿಲ್ಲೀಶ್ವರನ ಮಾನಸವನ್ನು ಜಗನ್ನಾಥನು ಆನಂದಪಡಿಸುತ್ತಿರಲು ಅವನ ಸಮೀಪದಲ್ಲಿ ಭಾಷ್ಯಾಬ್ಧಿಯನ್ನು ಕರತಲಾಮಲಕವಾಗಿ ಮಾಡಿದ ಪರಮ ವೈಯಾಕರಣನಾದ ಶ್ರೀನಾಗೇಶಭಟ್ಟನ ಗುರುವಾದ ಹರದೀಕ್ಷಿತನು ವ್ಯಾಕರಣದಲ್ಲಿ ವಿವಾದವನ್ನು ಮಾಡಲಿಚ್ಛೆಯುಳ್ಳವನಾಗಿ ಬಂದನು ಅವನು ಭೂಪತಿಯ ಬಳಿಗೆ ಬಂದು ವ್ಯಾಕರಣದಲ್ಲಿ ಜಗನ್ನಾಥಪಂಡಿತನೊಡನೆ ವಿವಾದ ಮಾಡುತ್ತೇನೆಂದು ಹೇಳಿಕೊಂಡನು ಅರಸನು ಯಾಕಾಗಲೊಲ್ಲದೆಂದು ಒಡಂಬಟ್ಟು ಪಂಡಿತರಾಜನಿಗೆ ಹಾಗೆ ಮಾಡಲು ವಿಜ್ಞಾಪಿಸಿದನು ಪಂಡಿತರಾಜನು ವಾದದಲ್ಲಿ ಹರದೀಕ್ಷಿತನನ್ನು ಗೆಲ್ಲುವದು ಅಶಕ್ಯವು ಮತ್ತು ವಾದವಿವಾದವಿಲ್ಲದೆ ಅರಸನನ್ನು ಸಂತೋಷಪಡಿಸುವದು ಆಗದು 'ಉಭಯತಃ ಪಾಶಾ ರಜ್ಜುಃ' ಕ್ಷಣಹೊತ್ತು ಹೀಗೆ ಚಿಂತಿಸಿ ಒಳ್ಳೇದೆಂದು ಅರಸನಿಗೆ ಉತ್ತರ ಕೊಟ್ಟನು. ಅನಂತರ ನಿಯಮಿತ ವೇಳೆಯಲ್ಲಿ ಪಂಡಿತ ಜನರು ಸಭೆಯನ್ನಲಂಕರಿಸಲು ದಿಲ್ಲೀಪತಿಯು ನಾನಾವಿಧರತ್ನವಿರಚಿತವಾದ ಮಯೂರಪಿಚ್ಛದ ಕಾಂತಿಯನ್ನು ಅಪಹರಿಸುವ, ಅಕಾಂಡದಲ್ಲಿಯೇ ಇಂದ್ರಧನುಸ್ಸು ಬಂದಿರುವದೋ ಏನೋ ಎಂದು ತೋರುತ್ತಿರುವ ಸಿಂಹಾಸನವನ್ನು ಏರಿ ಕುಳಿತಿರಲು ಹರದೀಕ್ಷಿತನು ವಿಜಿಗೀಷೆಯಿಂದ ಬಂದು ಕುಳಿತಿರಲು ಜಗನ್ನಾಥನು ಪ್ರತಿವಾದಿಗಳಿಗೆ ಮೋಹವನ್ನು ಹಬ್ಬಿಸುವ ಮಂತ್ರಗಳಿಂದ ಸಂಸ್ಕೃತವಾದ ಅಂಗಿಯನ್ನು ತೊಟ್ಟು ಕೊಂಡು ಸಭಾಮಂಟಪದಲ್ಲಿ ಪ್ರವೇಶ ಮಾಡಿದನು ಅಲ್ಲಿಂದ ಹರದೀಕ್ಷಿತನು ಪೂರ್ವ ಪಕ್ಷವನ್ನು ಮಾಡಲು ಜಗನ್ನಾಥನು ರಭಸದಿಂದ ಆವನೆಡೆಗೆ ಒಂದು ಅವನನ್ನು ಗಟ್ಟಿ ಯಾಗಿ ಅಪ್ಪಿಕೊಂಡನು ಕೂಡಲೆ ಜಗನ್ನಾಥನ ಶರೀರದಲ್ಲಿರುವ ಅಂಗಿಯ ಸ್ಪರ್ಶದಿಂದ ಮೋಹಗೊಂಡು ಹರದೀಕ್ಷಿತನ ಪ್ರಜ್ಞೆಯು ಇದ್ದೂ ಇಲ್ಲದಂತಾಯಿತು ಜಗನ್ನಾಥನು ಸಿದ್ಧಾಂತಿಸಿದಂತೆಯೇ ಹರದೀಕ್ಷಿತನು ಒಡಂಬಟ್ಟನು. ಕಡೆಗೆ ಜಗನ್ನಾಥನೇ ವಿಜಯಿ ಯಾದನು. ಮನೆಗೆ ತಿರುಗಿ ಬಂದಬಳಿಕ ಹರದಿಕ್ಷೀತನು ವಿನಿವೃತ್ತಮೋಹನಾಗಿ ಸಭೆ ಯಲ್ಲಿ ಆಡಿದ ಜಗನ್ನಾಥನ ವಚನಗಳನ್ನೂ ತನ್ನ ಮೂಕಪತ್ರವನ್ನೂ ನೆನಿಸಿ ನೆನಿಸಿ ತನ್ನೊಳಗೆ ತಾನೇ ನಕ್ಕನು

'ಮಾಕುರು ಪರವಾದಿ ನಿರ್ಜಯೇ ಶಂಕಾಂ' ಎಂದು ಮಹಾಕಾಲಿಯಿಂದ ವರವನ್ನು ಪಡಕೊಂಡ ಜಗನ್ನಾಥನು ಮತ್ತೇಕೆ ಪರವಾದಿಗಳನ್ನು ಗೆಲ್ಲಲಿಕ್ಕೆ ಮಂತ್ರಸಂಸ್ಕೃತವಾದ ಅಂಗಿಯನ್ನು ಅಂಗೀಕರಿಸಿದನೋ ! ! !

ಜಗನ್ನಾಥನ ವಿಷಯವಾಗಿ ಇನ್ನೊಂದು ಲೋಕಪ್ರವಾದವೇನಂದರೆ . ಮ್ಲೇಚ್ಛ ವಧುವನ್ನು ಜಗನ್ನಾಥನು ಲಗ್ನವಾದ ನಂತರ ತಾರುಣ್ಯವನ್ನೆಲ್ಲ ದಿಲ್ಲಿಯಲ್ಲಿ ಕಳೆದು ವಾರ್ಧಕ್ಯದಲ್ಲಿ ಕೇಶಪಾಶವು ಶರಚ್ಚಂದ್ರನ ಕಾಂತಿಯನ್ನು ಧರಿಸಲು ಹಲ್ಲುಗಳು ಕಳಚಿ ಹೋಗಿರಲು, ಹೆಂಡತಿಯೊಡನೆ ಕಾಶೀಪಟ್ಟಣಕ್ಕೆ ಬಂದು ಮಂದಾಕಿನೀ ತೀರದಲ್ಲಿ ವಾಸ

ಮಾದಿದನು ಒಂದು ದಿವಸ ನಸುಕಾಗಿದ್ದರೂ ಜಗನ್ನಾಥನು ಭಾಗೀರಥೀ ಘಟ್ಟದಲ್ಲಿ ಯವನಿಯಿಂದೊಡಗೂಡಿ ಸುಪ್ತನಾಗಿದ್ದನು. ಅವನ ಬಿಳಿದಾದ ಕೇಶಕಲಾಪವು ಹೊರಗೆ ಕಾಣಿಸುತ್ತಿತ್ತು ಅದನ್ನು ನೋಡಿ ಪವಿತ್ರವಾದ ಜಾಹ್ನವೀಜಲದಲ್ಲಿ ಪ್ರಭಾತಕಾಲದಲ್ಲಿ ಸ್ನಾನಮಾಡಿ ಹೋಗುತ್ತಿದ್ದ ಅಪ್ಪಯ್ಯದೀಕ್ಷಿತರು ಎಲಾ ಇನ್ನೂ ಈತನು ಮಲಗಿರುವನಲ್ಲ? ಎಲ್ಲರೂ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ಹೋಗುತ್ತಾರೆ. ಇವನನ್ನು ಎಚ್ಚರಿಸುವ ಎಂದು,

'ಕಿಂ ನಿಶಂಕಂ ಶೇಷೇಶೇಷೇ ವಯಸಿ ತ್ವಮಾಗತೇ ಮೃತ್ಯೌ ||'

ಪ್ರಾತಃಕಾಲವಾಗಿದ್ದರೂ ಇನ್ನೂ ಪವಿತ್ರವಾದ ಗಂಗಾತಟಾಕದಲ್ಲಿ ಮುದುಕನಾಗಿದ್ದರೂ ಮಲಗಿಕೊಂಡಿರುವೆಯಲ್ಲ?— ಈ ತೆರದ ಮಾತನಾಡಲು ಜಗನ್ನಾಥನು ಎಚ್ಚತ್ತು ಮಾತನಾಡುವವರು ಯಾರು ಎಂದು ಮುಸುಕು ತೆಗೆದು ನೋಡಿದನು ಆಗ ಅಪ್ಪಯ್ಯದೀಕ್ಷಿತರು ತನಗೆ ಅಜಯ್ಯನೂ ಅಪ್ರತಿಭಟನೂ ಆದ ಪಂಡಿತರಾಜನನ್ನು ನೋಡಿ ಪುನಃ– 'ಅಥವಾ ಸುಖಂ ಶಯೀಥಾ ನಿಕಟೇ ಜಾಗರ್ತಿ ಜಾಹ್ನವೀ ಭವತಃ' ನೀನೇ ನಮ್ಮಪ್ಪಾ! ಕುಶಲವಾಗಿ ಮಲಗಿಕೊಳ್ಳು. ಹತ್ತಿರ ಭಾಗೀರಥಿಯು ಎಚ್ಚರವಾಗಿದ್ದಾಳಷ್ಟೇ!!!' ಎಂದು ಅಂದರು

ಜಗನ್ನಾಥ ಪಂಡಿತನ ವಿಷಯವಾಗಿ ಕೇಳಲ್ಪಡುವ ಇನ್ನೊಂದು ವಾರ್ತೆಯೇನಂದರೆ. ಪಂಡಿತರಾಜನ ರಾಮನೆಂಬ ಪೌತ್ರನೊಬ್ಬನು ಬಾಲಕನಿರುವಾಗ್ಗೆ ಇತರ ಹುಡುಗರ ಕೂಡ ಆಡಲಿಕ್ಕೆ ಹೋಗಿದ್ದನು ಆ ಆ ಬೇಸಾಯದ ಹುಡುಗರು ಆ ಆ ಆಟಿಗೆಯ ಸಾಮಾನುಗಳನ್ನು ತೆಗೆದುಕೊಂಡು ಬಂದಿದ್ದರು ಬಡಿಗರ ಹುಡುಗನು ಸಣ್ಣದಾದ ಚಕ್ಕಡಿಯನ್ನೂ ಕಟ್ಟಿಗೆಯ ಎತ್ತುಗಳನ್ನೂ ತಂದಿದ್ದನು ಕುಂಬಾರ ಹುಡುಗನು ಮಣ್ಣಿನ ಸಾಮಾನುಗಳನ್ನು ತಂದಿದ್ದನು. ಆ ಹುಡುಗರು ರಾಮನನ್ನು ಕುರಿತು, ಈ ಹಾರುವರ ಹುಡುಗನು ಏನೂ ತಂದಿಲ್ಲ. ನಾವೇಕೆ ಆಡಲಿಕ್ಕೆ ಕರೆದುಕೊಳ್ಳಬೇಕು, ಎಂದು ಅಂದರು ಹಾಗು ಏನನ್ನಾದರೂ ತೆಗೆದುಕೊಂಡು ಬಂದರೇ ನಿನ್ನನ್ನು ಕರೆದುಕೊಳ್ಳುವೆವೆಂದು ಹಟತೊಟ್ಟರು. ಆಗ ರಾಮನು ತನ್ನ ಪಿತಾಮಹನ ಹತ್ತಿರ ಬಂದು— ಮುತ್ಯಾ, ನನ್ನನ್ನು ಹುಡುಗರು ಕರೆದುಕೊಳ್ಳುವದಿಲ್ಲವಂತೆ, ಏನಾದರೂ ಕೊಡೋ, ಕೊಟ್ಟರೇ ಆಡಲಿಕ್ಕೆ ಕರಕೊಳ್ಳುತ್ತಾರಂತೆ, ಎಂದು ಕಾಡಹತ್ತಿದನು

ಮೊಮ್ಮಗನ ವಚನಗಳನ್ನು ಕೇಳಿದ ಕೂಡಲೇ ಅಶ್ವಧಾಟಿಯ ಹದಿನಾಲ್ಕು ಶ್ಲೋಕಗಳನ್ನು ರಚಿಸಿದ ಕಾಗದದ ಮೇಲೆ ಬರೆದು ಆ ಕಾಗದವನ್ನು ರಾಮನ ಕೈಯಲ್ಲಿ ಕೊಟ್ಟು ಇದನ್ನು ತಕ್ಕೊಂಡು ಹೋಗು, ಕರೆದುಕೊಳ್ಳುತ್ತಾರೆಂದು ಹೇಳಿದನು.

ಅದನ್ನು ತೆಗೆದುಕೊಂಡು ರಾಮನು ಇತರ ಹುಡುಗರ ಹತ್ತಿರ ಹೋಗಲು ಅವರು "ಹೋಗೆಲೆ ಹಾರಬಡ್ಡೀಮಗನೇ; ಇದನ್ನು ತಕ್ಕೊಂಡು ನಾವೇನು ಮಾಡುವಾ? ನಾವು ನಿನ್ನನ್ನು ಕರಕೊಳ್ಳುವದಿಲ್ಲ. ಇದನ್ನು ತಕ್ಕೊಂಡು ನಿಮ್ಮ ಮುತ್ಯಾನ

ಕೊರಳಲ್ಲಿ ಕಟ್ಟಿ ಹೋಗು" ಎಂದು ಅಂದರು ರಾಮನು ಕಾಗದವನ್ನು ತಕ್ಕೊಂಡು ಹಾಗೇ ಅಳುತ್ತ ತಿರುಗಿ ಪಿತಾಮಹನ ಹತ್ತರ ಹೋದನು ಆಗ ಜಗನ್ನಾಥನು ಪೌತ್ರ ನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಮಾಧಾನ ಪಡಿಸಿ ಮೊಮ್ಮಗನ ಸರ್ವಾಂಗ ವನ್ನು ದಿವ್ಯದೃಷ್ಟಿಯಿಂದ ನೋಡಿದನಂತೆ ಅದರಿಂದ ಆ ಹುಡುಗನಿಗೆ ದಿವ್ಯಜ್ಞಾನ ವಾಗಲು ಆ ಹದಿನಾಲ್ಕು ಶ್ಲೋಕಗಳಿಂದ ಉಪದೇಶ ಮಾಡಿದನಂತೆ —

ರಾಮನಾಮ್ನಃ ಸ್ವಪೌತ್ರಸ್ಯ ಕಾಮನಾಪೂರಣೋತ್ಸುಕಃ ||
ಅಶ್ವಧಾಟೀಮ್ ಜಗನ್ನಾಥೋ ವಿಶ್ವಹೃದ್ಯಾಮರೀರಚತ್ ||

'ಅರೀರಚತ್' ಪ್ರಯೋಗವು ಪಾಣಿನೀಯ ನಿಯಮದಿಂದ ಸಿದ್ಧವಾದುದಲ್ಲ 'ಅಚೀಕರತ್' ಇರುವದು ಯುಕ್ತವೆಂದು ವಿಬುಧರ ಅಭಿಪ್ರಾಯ ಅಶ್ವಧಾಟೀಕಾವ್ಯವು ಸರಲವಾದುದೂ ಮನೋಹರವಾದುದೂ ಇರುವದು ಕವಿಯು ಪ್ರಾಸವನ್ನು ಅನು ಸರಿಸಿ ನಡೆದಿದ್ದರೂ ಪ್ರಾಯ ಕ್ಲಿಷ್ಟತೆಯು ಬಂದಿಲ್ಲ. ವಾದಿರಾಜ ಸ್ವಾಮಿಗಳವರ ಅಶ್ವ ಧಾಟಿಗೂ ಇದಕ್ಕೂ ಮಹದಂತರವುಂಟು. ಅದು ಕೇವಲ ಕ್ಲಿಷ್ಟವಾಗಿದೆ. ಅಶ್ವಧಾಟಿ ಯನ್ನು ರಚಿಸಿದ ಜಗನ್ನಾಥನೇ ಬೇರೆಯೆಂದೂ ಕೆಲವರ ಅಭಿಪ್ರಾಯ

## ಇನ್ನೊಂದು ಆಖ್ಯಾಯಿಕೆ

ದಿಲ್ಲೀಪತಿಗೆ ಒಬ್ಬ ಮ್ಲೇಚ್ಛಜಾತೀಯ ಪುರೋಹಿತನಿದ್ದನು. ಅವನು ಸಂಸ್ಕೃತ ಭಾಷೆಯಲ್ಲಿ ಸುತರಾಂ ನಿಷ್ಣಾತನಿದ್ದನು. ಶಾಸ್ತ್ರಸಾಗರವನ್ನು ಉಲ್ಲಂಘಿಸಿದ್ದನು ಅಲ್ಲಲ್ಲಿ ಪಂಡಿತರಿದ್ದಲ್ಲಿಗೆ ಹೋಗಿ ಅವರೊಡನೆ ವಾದವಿವಾದ ಮಾಡಿ ಅವರನ್ನು ಸೋಲಿಸುತ್ತಿ ದ್ದನು ಸನಾತನ ಭಾರತ ಧರ್ಮದ ಉತ್ಸಾದನವನ್ನು ಮಾಡುತ್ತ, ಪ್ರತಿಪಕ್ಷಿ ಪಕ್ಷ ಗಳನ್ನು ನಿರಾಕರಿಸುತ್ತ, ಯವನಧರ್ಮವನ್ನು ಪ್ರತಿಪಾದಿಸುತ್ತ, ಖಂಡಿಸುತ್ತ, ಅಸ್ಖ ಲಿತವಾದ ಸಂಸ್ಕೃತವಾಣಿಯಿಂದ ಭಾರತೀಯ ಪಂಡಿತರನ್ನು ನಾಚಿಸುತ್ತ, ದಕ್ಷಿಣ ಪ್ರದೇಶವನ್ನೆಲ್ಲ ಗೆದ್ದು, ಪಂಡಿತರ ತವರ್ಮನೆಯಾಗಿರುವ ಶಶಿಖಂಡ ವೌಲಿಯ ಪವಿತ್ರ ವಾದ ಸನ್ನಿಧಾನದಿಂದ ವಾಸಮಾಡಿದವರ ಪಾಪರಾಶಿಯನ್ನು ಹೊಡೆದೋಡಿಸುವ ಮಂದಾಕಿನೀ ನದಿಯ ಮೇಲೆ ಬರುವ ಗಾಳಿಯಿಂದ ಪೂತವಾದ ಕಾಶೀಪಟ್ಟಣಕ್ಕೆ ಬಂದನು ಕಾಜಿಯು ಅಲ್ಲಿ ಸಭೆಗೂಡಿಸಿ ಪಂಡಿತರೊಡನೆ ವಿವಾದ ಮಾಡಲಾರಂಭಿಸಿದನು ಅಲ್ಲಿಂದ ಪಂಡಿತರಾದರೂ ಅಹಂಮನ್ಯತೆಯಿಂದ ಬಂದು ವಿವಿಧ ಯುಕ್ತಿಗಳಿಂದ ನಾನಾ ವಿಧವಾದ ವಚನರಚನೆಗಳಿಂದ ಪರಿಸ್ಫುರತ್ಪ್ರಮಾಣ ಪರಂಪರೆಗಳಿಂದ ಕಾಜಿಯನ್ನು ಗೆಲ್ಲಲಿಕ್ಕೆ ಪ್ರಯತ್ನಪಟ್ಟರು ಕಾಜಿಯಂತೂ ಸುಟ್ಟರಗಾಳಿಯು ಹಾದಿಯಲ್ಲಿ ಪತಿತವಾದ ತೃಣಾಂಕುರಗಳನ್ನು ಹಾರಿಸುವಂತೆ ಪಂಡಿತರ ವಚನಗಳನ್ನು ಹುರುಳಿಲ್ಲದ ವಚನಗಳಂತೆ ಹಾರಿಸಿಬಿಟ್ಟನು ' ಸಭೆಯಲ್ಲಿ ಅಗ್ರಾಸನದ ಮಾನವು ಕಾಜಿಗೇ ದೊರೆಯಿತು. ಕಾಜಿ ಯನ್ನು ಗೆಲ್ಲಲು ಅಸಮರ್ಥರಾಗಿ ಅವಮಾನವನ್ನು ಹೊಂದಿದ ದ್ವಿಜನ್ಮರು ಸೇವಕ ಜನರ

ವಿಪತ್ತನ್ನು ನಾಶ ಮಾಡುವ ಭಗವಂತನಾದ ವಿಶ್ವೇಶ್ವರನ ಬಳಿಗೆ ಬಂದು ಅನನ್ಯ ಭಕ್ತಿಯಿಂದ ಅವನ ಉಪಾಸನೆ ಮಾಡತೊಡಗಿದರು ಆಗ ವಿಶೇಷ ವೃತ್ತಾಂತವನ್ನು ತಿಳಿದ ಭಗವಾನ್ ಶಂಭುವು ಆಗಲೇ ಪ್ರತ್ಯಕ್ಷವಾಗಿ ಬ್ರಾಹ್ಮಣರಿಗೆ ಹೇಳಿದನು— "ಇಲ್ಲಿದ್ದ ರತ್ನೇಶ್ವರನೆಂಬ ಧನಿಕನ ಮನೆಯಲ್ಲಿ ಒಬ್ಬ ನೀರಿನವನು ಇರುವನು ಅವನೇ ನಿಮ್ಮ ಕಾಜಿಯನ್ನು ಗೆಲ್ಲುವನು, ಅವನನ್ನೇ ಬೇಡಿಕೊಳ್ಳಿರಿ "

ವಿಬುಧರು ತಮ್ಮ ಮನೋರಥತರುವು ಫಲಿಸಿತೆಂದು ಬಗೆದು ಆ ರತ್ನೇಶ್ವರ ಶೆಟ್ಟಿಯ ಮನೆಗೆ ಬಂದು ಭಗವಂತನ ನಿರ್ದೇಶವನ್ನು ತಿಳಿಸಿದರು ಅವನಾದರೂ ಅವರ ಮಾತನ್ನು ಕೇಳಿ ವಿಸ್ಮಯಾಪನ್ನನಾಗಿ ನೀರಿನ ಕರ್ಮದಲ್ಲಿ ಅಧಿಕೃತನಾದ ತನ್ನ ದಾಸನನ್ನು ಕರೆದು ಬ್ರಾಹ್ಮಣ ಸಮಾಜದ ಕೋರಿಕೆಯನ್ನು ಅವನ ಮುಂದೆ ಹೇಳಿದನು ಮತ್ತು ಈ ಕರ್ಮದಲ್ಲಿ ನೀನು ಸಮರ್ಥನಿರುವೆಯೋ ? ಎಂದು ಕೇಳಿದನು

ಆಗಲವನು ನಿಮ್ಮ ಅಪ್ಪಣೆಯು ನನಗೆ ಶಿರಸಾ ಮಾನ್ಯವಿರುವದು ಒಳ್ಳೇದು ನಿಮ್ಮ ಕೆಲಸವನ್ನು ಮಾಡುವೆನೆಂದು ಉತ್ತರ ಕೊಟ್ಟನು

ಆಗ ಬ್ರಾಹ್ಮಣನು ಸಂತೋಷದಿಂದ ಅವನನ್ನು ಕರೆದುಕೊಂಡು ಹೋಗಿ ಹೊಲಸು ಅರಿವೆಗಳನ್ನೆಲ್ಲ ತೆಗೆದು ಕೌಶೇಯ ವಸ್ತ್ರಗಳನ್ನು ಉಡಿಸಿತೊಡಿಸಿ ಅನರ್ಘ್ಯವಾದ ಭೂಷಣಗಳಿಂದ ಅವನ ದೇಹವನ್ನು ಅಲಂಕರಿಸಿ ಬಂಗಾರದ ಪಾಲಿಕೆಯಲ್ಲಿ ಕುಳ್ಳಿರಿಸಿಕೊಂಡು ಒಳ್ಳೇ ವೈಭವದಿಂದ ಅವನನ್ನು ಸಭೆಗೆ ಕರೆದುಕೊಂಡು ಹೋದರು ಅಲ್ಲಿ ಆಸನದ ಮೇಲೆ ಕುಳ್ಳಿರಿಸಿ ಕಾಜಿಯನ್ನು ವಾದಕ್ಕೆ ಕರೆದರು ಕಾಜಿಯೊಡನೆ ವಾದ ವಿವಾದವು ಪ್ರಾರಂಭವಾಯಿತು ಕಡೆಗೆ ಬ್ರಾಹ್ಮಣರ ಪ್ರತಿನಿಧಿಯ ವಚನಚಾತುರ್ಯದಿಂದ ವಿಸ್ಮಿತನಾಗಿ ಅಶ್ರುತಪೂರ್ವವಾದ ಸಹಸ್ರಶಃ ಯುಕ್ತಿಗಳನ್ನು ಕೇಳಿ ಇತಿಕರ್ತವ್ಯತಾವಿಮೂಢನಾಗಿ ವಿವಾದಸಾಗರವನ್ನು ಕಾಜಿಯು ದಾಟಿದ ಅವನಿಂದ ಪರಾಜಯವನ್ನು ಹೊಂದಿದನು 'ಜಿತಂಜಿತಂ' ಎಂದು ಬ್ರಾಹ್ಮಣರ ಸಮುದಾಯವು ಕರಾಸ್ಫಾಲನಪೂರ್ವಕವಾಗಿ ಪ್ರತಿನಿಧಿಯ ಜಯಘೋಷ ಮಾಡಿತು ಆ ಮೇಲೆ ಊದುತ್ತ ಬಾರಿಸುತ್ತ— ಒಳ್ಳೇ ಉತ್ಸವದಿಂದ ಅವನನ್ನು ಶ್ರೇಷ್ಠಿಯ ಮನೆಗೆ ಕರೆದುಕೊಂಡು ಬಂದರು ಶ್ರೇಷ್ಠಿಗೆ ಸಕಲವೃತ್ತಾಂತವನ್ನು ತಿಳಿಸಿದರು ಎಲ್ಲರೂ ಆಶ್ಚರ್ಯಚಕಿತರಾಗಿ ಕಾಜಿಯನ್ನು ಗೆದ್ದ ಆ ಮೂರ್ತಿಯ ಕುಲಗೋತ್ರಾದಿಗಳನ್ನು ವಿಚಾರಿಸಿದರು ಅವನಿಂದ ಅಶೇಷವಾಗಿ ಹೇಳಲ್ಪಡಲು ಕಾಶಿಯ ವಿಬುಧರು ಇವನೇ 'ಜಗನ್ನಾಥ ಪಂಡಿತ'ನೆಂದು ನಿಶ್ಚಯಿಸಿದರು ಅನಂತರವೇ ಕಾಜಿಯು ಪಂಡಿತರಾಜನ ಮಿತ್ರನಾಗಿ ದಿಲ್ಲೀಬಾದಶಹನ ಪರಿಚಯವನ್ನು ಪಂಡಿತರಾಜನಿಗೆ ಮಾಡಿಸಿಕೊಟ್ಟನಂತೆ

ಈ ವಾರ್ತೆಯ ವಿಷಯವಾಗಿದ್ದ ಅಭಿಜ್ಞರ ಆಕ್ಷೇಪಗಳು ಜಗನ್ನಾಥನ ಸ್ವಭಾವವು ಅಹಂಕಾರಭೂಯಿಷ್ಠವಾದದ್ದು ಅವನು ಎರಡನೆಯವರ ಅಪಮಾನವನ್ನು ಎಳ್ಳಷ್ಟಾದರೂ ಸಹನ ಮಾಡನು ಇಂತಹ ಮನುಷ್ಯನು ನೀರಿನವನಾಗಿ ಎರಡನೆಯವರ

ಸೇವಕತ್ವವನ್ನು ಅಂಗೀಕರಿಸುವದು ಎಂತಹ ಮಾತೋ ! ! ! ಆಖ್ಯಾಯಿಕೆಗಳು ಸಟಿಯಾಗಿರಲಿ, ದಿಟವಾಗಿರಲಿ, ಇವುಗಳ ಪ್ರಸಾರವನ್ನು ಅಜ್ಞಸಮಾಜದಲ್ಲಿ ಮಾಡತಕ್ಕದ್ದೇ ಸುಜ್ಞರು ಪಂಡಿತರ ವೈದುಷ್ಯದಿಂದ ಪ್ರೀತರಾದರೆ ಅಜ್ಞರು ಈ ತರದ ಆಖ್ಯಾಯಿಕೆಗಳನ್ನು ಕೇಳಿ ಪಂಡಿತರಲ್ಲಿ ಗೌರವವುಳ್ಳವರಾಗಿರುವದು ಕಂಡುಬರುವದು ಅಜ್ಞ ಜನರಲ್ಲಿ ಕಾಲಿದಾಸನ ವಿಷಯವಾಗಿ ಪ್ರೀತಿ ಇರುವದು ಯಾತರಿಂದ ? ಅವನ ಅನೇಕ ಆಖ್ಯಾಯಿಕೆಗಳು ಪ್ರಚಾರದಲ್ಲಿರುವವು

## ಪಂಡಿತರಾಜನ ಗ್ರಂಥಗಳು

ಪ್ರಾಣಾಭರಣಮ್— ನಿರ್ಣಯಸಾಗರ ಮುದ್ರಾಲಯದ ಕಾವ್ಯಮಾಲೆಯ ಪ್ರಥಮಗುಚ್ಛದಲ್ಲಿ ಈ ಕಾವ್ಯವು ಪ್ರಕಟವಾಗಿರುವದು ಈ ಕಾವ್ಯದಲ್ಲಿ ಕಾಮರೂಪ ದೇಶಾಧಿಪತಿಯಾದ 'ಪ್ರಾಣನಾರಾಯಣ'ನೆಂಬ ಅರಸನ ಸ್ತುತಿಯುಂಟು ಇದಕ್ಕೆ ಪಂಡಿತರಾಜನಿಂದಲೇ ವಿರಚಿಸಲ್ಪಟ್ಟ ಅತೀವ ಸಂಕ್ಷಿಪ್ತವಾದ ಟಿಪ್ಪಣಿಯುಂಟು ಅದರಿಂದ ಪದ್ಯಗಳಲ್ಲಿಯ ಅಲಂಕಾರ ಧ್ವನ್ಯಾದಿಗಳು ಸುಲಭವಾಗಿ ತಿಳಿಯುವವು ಈ ಕಾವ್ಯದಲ್ಲಿ ಜಗನ್ನಾಥನ ಅದ್ವಿತೀಯ ಕವಿತ್ವವು ವ್ಯಕ್ತವಾಗುವದು ಈ ಕಾವ್ಯದ ಮೊದಲನೇ ಪದ್ಯವು —

ವಿದ್ವಾಂಸೋ ವಸುಧಾತಲೇ ಪರವಚಃಶ್ಲಾಘಾಸು ವಾಚಂಯಮಾಃ |
ಭೂಪಾಲಾಃ ಕಮಲಾವಿಲಾಸಮದಿರೋನ್ಮೀಲನ್ಮದಾಘೂರ್ಣಿತಾಃ ||
ಆಸ್ಯೇ ಧಾಸ್ಯತಿ ಕಸ್ಯ ಲಾಸ್ಯಮಧುನಾ ಧನ್ಯಸ್ಯ ಕಾಮಾಲಸ |
ಸ್ವರ್ವಾಮಾಧರಮಾಧುರೀಮಧರಯನ್ ವಾಚಾಂ ವಿಲಾಸೋ ಮಮ ||

ಭೂಮಂಡಲದಲ್ಲಿ ಪಂಡಿತರಿಗಂತೂ ಎರಡನೆಯವರ ವಾಣಿಯನ್ನು ಸ್ತೋತ್ರ ಮಾಡಲಿಕ್ಕೆ ಮಾನ ಸಾಲುವದಿಲ್ಲ, ಆದುದರಿಂದ ಅವರು ಮೂಕವ್ರತವನ್ನು ಧಾರಣ ಮಾಡುವರು. ಅರಸರಂತೂ ಲಕ್ಷ್ಮೀವಿಲಾಸವೆಂಬ ಮದ್ಯದ ಮದದಿಂದ ಕಣ್ಣು ಮುಚ್ಚಿಕೊಂಡು ಕುಳಿತಿರುವರು. ಆದ್ದರಿಂದ ಕಾಮದಿಂದ ಅಲಸರಾದ ಸ್ವರ್ಗಾಂಗನೆಯರ ಅಧರದ ಮಾಧುರ್ಯವನ್ನು ಧಿಕ್ಕರಿಸುವ ನನ್ನ ವಾಗ್ವಿಲಾಸವು ಯಾವ ಧನ್ಯನ ಮುಖದಲ್ಲಿ ತನ್ನ ಕುಣಿತವನ್ನು ಮಾಡಬೇಕು ! ! !

ಪೂತುರೆ ! ಸರಸ್ವತೀ ನಿಸ್ಸೀಮ ಉಪಾಸಕಾ ! ! ಪಂಡಿತರಾಜಾ ! ! ! ನಿರ್ವಿಣ್ಣನಾದ ನಿನ್ನ ಮುಖಕಮಲದಿಂದ ಹೊರಟ ಈ ಉದ್ಗಾರವು ನಿನ್ನಂತೆ ನಿರ್ವಿಣ್ಣರಾಗಿ ಸುತ್ತಲಿನ ಜನರಿಂದ ಉತ್ತೇಜನವನ್ನು ಹೊಂದಿರುವ ಸರಸ್ವತೀ ಭಕ್ತರ ಸಂತಪ್ತವಾದ ಮಾನಸವನ್ನು ಸಮಾಧಾನಪಡಿಸಲು ಸಮರ್ಥವಾಗಿರುವದು.

ಜಗನ್ನಾಥನ ರಸಭರಿತ ಕಾವ್ಯಗಳನ್ನು ಓದಿದ ಕೂಡಲೇ ನಮಗೆ ಭರ್ತೃಹರಿಯ

ವಿದ್ವಾಂಸೋ ಮತ್ಸರಗ್ರಸ್ತಾ ಪ್ರಭವಃ ಸ್ಮಯದೂಷಿತಾಃ ||
ಅಬೋಧೋಪಹತಾಶ್ಚಾನ್ಯೇ ಜೀರ್ಣಮಂಗೇ ಸುಭಾಷಿತಂ ||

ಈ ಸುಂದರ ಶ್ಲೋಕವು ನೆನಪಾಗುವದು

(ತಿಳಿದವರು ಹೊಟ್ಟೆಕಿಚ್ಚುಪಡುವರು, ಶ್ರೀಮಂತರಂತೂ 'ಕವಿಯ ಕಾವ್ಯವೋ' ಸುಂದರವಿದ್ದರೆ ಇದ್ದೀತು ಬಿಡು, ಎಂದು ಅಲ್ಲಗಳೆದು ನೋಡುವದೇ ಇಲ್ಲ. ಉಳಿದವರಿಗೆ ತಿಳಿಯುವದೇ ಇಲ್ಲ ಅಂತೂ ಇಂತೂ ಕವಿಯ ಸುಭಾಷಿತವು ಕವಿಯ ಶರೀರದಲ್ಲಿಯೇ ಹಳೆಯದಾಗಿ ಹೋಗಬೇಕು )

ಪಂಡಿತರಾಜನು ಹೀಗೆ ಮೊದಲನೇ ಶ್ಲೋಕದಲ್ಲಿ ಅಸಾಮಾನ್ಯವಾದ ಮಧುರಿಮೆಯಿಂದ ಮಂಡಿತವಾದ ತನ್ನ ವಾಗ್ವಿಲಾಸದ ರಸಾಸ್ವಾದದಲ್ಲಿ ಪಟುತಮನಾದ ನರನಸ್ನು ಕಾಣದಲೆ ಖೇದವನ್ನು ತೋರಿಸಿ, ಎರಡನೇ ಶ್ಲೋಕದಲ್ಲಿ

ಬಿದ್ರಾಣ್ಯೈವ ಗುಣಜ್ಞತಾ ಸಮುದಿತೋ ಭೂಯಾನಸೂಯಾಭರಃ ।
ಕಾಲೋಽಯಂ ಕಾಲರಾಜಗಾಮ ಜಗತೀಲಾವಣ್ಯ ಕುಕ್ಷಿಂಭರಿಃ ॥
ಏವಂ ಭಾವನಯಾ ಮದೀಯಕವಿತೇ ಮೌನಂ ಕಿಮಾಲಂಬಸೇ ।
ಜಾಗರ್ತಿ ಕ್ಷಿತಿ ಮಂಡಲೇ ಚಿರಮಿಹ ಶ್ರೀಕಾಮರೂಪೇಶ್ವರಃ ॥

ಜಗತ್ತಿನಲ್ಲಿಯ ಗುಣಜ್ಞತೆಯು ಹೊರಟುಹೋಯಿತು ಎತ್ತ ನೋಡಿದರೂ ಹೊಟ್ಟೆಕಿಚ್ಚು ಉರಿಯಹತ್ತಿದೆ, ಜಗತ್ತಿನಲ್ಲಿರುವ ಸೌಂದರ್ಯವನ್ನೆಲ್ಲ ಭಕ್ಷಿಸಿ ಅದರಿಂದಲೇ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವ ಕೂಳಬಕ್ಕನಾದ ಕಲಿಕಾಲನು ಬಂದನು ಹೀಗೆ ತಿಳಿದು— ಎಲೈ ನನ್ನ ಕವಿತೆಯೇ ! ಮೌನವನ್ನವಲಂಬಿಸಬೇಡ, ಭೂಮಂಡಲದಲ್ಲಿ ಈ ಕಾಮರೂಪ ದೇಶಾಧಿಪತಿಯೊಬ್ಬನು ಬಹುಕಾಲ ಬದುಕಿದ್ದರೆ ಸಾಕು !

ಈ ತೆರದ ತನ್ನ ಕವಿತ್ವವನ್ನು ಸಮಾಧಾನಪಡಿಸುತ್ತಾನೆ ಈ ಪದ್ಯದಿಂದ ಆಗಿನ ಸಮಯದಲ್ಲಿ ಜಗನ್ನಾಥನ ಸುತ್ತಲಿರುವ ಜನರಲ್ಲಿ ಕಾಮರೂಪಾಧಿಪತಿಯು ಅಸಾಧಾರಣ ಗುಣಜ್ಞನಾಗಿದ್ದನೆಂದೂ, ಕಾವ್ಯರಸಾಸ್ವಾದಲೋಲುಪನಾಗಿದ್ದನೆಂದೂ, ಜಗನ್ನಾಥನಿಗೆ ಆಶ್ರಯವನ್ನು ಕೊಟ್ಟಿದ್ದನೆಂದೂ ಗೊತ್ತಾಗುವದು ಇದರಿಂದಲೇ ಪ್ರಾಣಾಭರಣ ಕಾವ್ಯವು ಜಗನ್ನಾಥನ ಮೊದಲನೇ ಕೃತಿಯಾಗಿರಬೇಕೆಂದು ಊಹಿಸಲು ಅವಕಾಶವಿದೆ. ಯಾಕಂದರೆ ಈ ಪದ್ಯದಲ್ಲಿ– ಭೂಮಂಡಲದಲ್ಲಿ ವಿದ್ವಾಂಸರು ಇರುತ್ತಾರೆಂಬ ಮಾತನ್ನಾದರೂ ಜಗನ್ನಾಥನು ಅಂಗೀಕರಿಸಿದ್ದಾನಷ್ಟೇ ? ಎಲ್ಲಿಯೋ ದಿಗಂತರದಲ್ಲಿ ವಿದ್ವಾಂಸರು ಇರುತ್ತಾರೆಂದು ಕೇಳಲ್ಪಡುವದೆಂದು, ನಿಖಿಲ ಪೃಥ್ವಿಯನ್ನು ತೃಣಕ್ಕೆ ಪ್ರಸ್ತುತದಲ್ಲಿ ಬಗೆದಿಲ್ಲ. ಕ್ರಮವಾಗಿ ಅಶೇಷ ವಿದ್ಯೆಗಳಲ್ಲಿ ವಿಶಾರದನಾಗಿ ಅಖಿಲ ಪಂಡಿತರನ್ನು ತೃಣಕ್ಕೆ ಬಗೆದಿರಬಹುದು.

ಈ ಕಾವ್ಯದ ೫ ನೇ ಶ್ಲೋಕದ ಅರ್ಥದಲ್ಲಿ ಸ್ಮರಣೀಯವಾದ ಸೌಂದರ್ಯವುಂಟು. ಸಹೃದಯರೇ ಹುಂ ನೋಡಿರಿ. ಮಧುರವಾಗಿ ಇಮ್ಮಡಿನೇ ಗಾಯನ ಮಾಡಿರಿ ! ! !

ಮಹಾತ್ಮ್ಯಸ್ಯ ಪರೋऽವಧಿರ್ನಿಜಗೃಹಂ ಗಂಭೀರತಾಯಾಃ ಪತಿಃ |
ರತ್ನಾನಾಮಹಮೇಕ ಏವ ಭುವನೇ ಕೋವ ಪರೋ ಮಾದೃಶಃ ||
ಇತ್ಯೇವ ಪರಿಚಿಂತ್ಯ ಮಾಸ್ಮ ಸಹಸಾ ಗರ್ವಾಂಧಕಾರಂಗಮೋ |
ದುಗ್ಧಾಂಬೋ ಭವತಾ ಸಮೋ ವಿಜಯತೇ ಶ್ರೀಪ್ರಾಣನಾರಾಯಣಃ ||

ಓ ಕ್ಷೀರಸಾಗರಾ ? "ಮಹಿಮೆಯ ಹೆಚ್ಚಳವನ್ನು ನೋಡಬೇಕು ನನ್ನಲ್ಲಿ. ಗಾಂಭೀರ್ಯಕ್ಕಂತೂ ನಾನೇ ತವರ್ಮನೆಯು, ರತ್ನಗಳಿಗಂತೂ ನಾನೇ ಆಕರನು, ನನ್ನಂಥವರು ಜಗತ್ತಿನಲ್ಲಿ ಇವರಿರುವರೆಂದು" ಹೆಮ್ಮೆಯಿಂದ ಎದೆ ತಟ್ಟಿಕೊಂಡು ಮುಂದೆ ಬರಬೇಡ ಶ್ರೀ ಪ್ರಾಣನಾರಾಯಣನೊಬ್ಬನು ಜಗತ್ತಿನಲ್ಲಿ ಇರುವನು ಈ ಶ್ಲೋಕದಿಂದ ಕಾಮರೂಪೇಶ್ವರನಿಗೆ ಶ್ರೀಪ್ರಾಣನಾರಾಯಣನೆಂಬ ಹೆಸರು ಇತ್ತೆಂದು ಗೊತ್ತಾಗುವದು ಪ್ರತೀಪಾಲಂಕಾರ * ದಿಂದ ಒಡಗೂಡಿದ ಈ ಶ್ಲೋಕವು ಹೃದಯಾಲು ವಾಚಕರ ಮನವನ್ನು ರಂಜಿಸುವದು. ಕೆಲವರು ಈ ಕವಿತೆಯಲ್ಲಿ ಉಪಮಾವಿಶೇಷವೇ ಇರುವದೆಂದೂ ಇತರರು ಅತಿರಿಕ್ತಾಲಂಕಾರವು ಕಂಗೊಳಿಸುವದೆಂದೂ ಹೇಳುವರು ಎಂದು ಜಗನ್ನಾಥನು ಈ ಶ್ಲೋಕದ ಟಿಪ್ಪಣಿಯಲ್ಲಿ ಹೇಳಿರುವನು.

ಈ ಕಾವ್ಯದ ೧೦ ನೇ ಶ್ಲೋಕವು :

ಕ್ಷೋಣೀಂ ಶಾಸಂತಿ ಮಯ್ಯುಪದ್ರವಲವಃ ಕಸ್ಯಾಪಿ ನ ಸ್ಯಾದಿತಿ |
ಪ್ರೌಢಂ ವ್ಯಾಹರತೋ ವಚಸ್ತವ ಕಥಂ ದೇವ, ಪ್ರತೀಮೋ ವಯಮ್ ||
ಪ್ರತ್ಯಕ್ಷಂ ಭವತೋ ವಿಪಕ್ಷನಿವಹೈರ್ದ್ಯಾಮುತ್ಪತದ್ಭಿಃ ಕ್ರುಧಾ |
ಯದ್ಯುಷ್ಮತ್ಕುಲಕೋಟಿಮೂಲಪುರುಷೋ ನಿರ್ಭಿಂದ್ಯತೇ ಭಾಸ್ಕರಃ ||

ಓ ಕಾಮರೂಪಾಧಿಪತೇ ! ನಾನು ಭೂಮಂಡಲವನ್ನು ಆಳುತ್ತಿರಲು ಯಾವ ತ್ರಾಸಲೇಶವಾದರೂ ಆಗಲಾರದೆಂಬ ನಿನ್ನ ಪ್ರೌಢವಚನದಲ್ಲಿ ನಾವು ಹೇಗೆ ವಿಶ್ವಾಸವನ್ನಿಡುವಾ ? ನಿನ್ನ ಪ್ರತ್ಯಕ್ಷದಲ್ಲಿಯೇ ಸ್ವರ್ಗಕ್ಕೆ ಹೋಗುವ ನಿನ್ನ ವೈರಿಗಳು ನಿಮ್ಮ ಕುಲದ ಮೂಲಪುರುಷನಾದ ಸೂರ್ಯನ ಮಂಡಲವನ್ನು ಭೇದಿಸುವರಲ್ಲ ?

ರಣಾಂಗಣದಲ್ಲಿ ಮಡಿದು ಸ್ವರ್ಗಕ್ಕೆ ಹೋಗುವವರು ಮೊದಲು ಸೂರ್ಯಮಂಡಲವನ್ನು ಭೇದ ಮಾಡಿ ಹೋಗುವರೆಂದು ಶ್ರುತಿಯುಂಟು ಕಾಮರೂಪಾಧಿಪತಿಯಿಂದ ಹತರಾದ ವೈರಿಗಳು ಅವನ ಸಮಕ್ಷಮದಲ್ಲಿಯೇ ಸೂರ್ಯಮಂಡಲವನ್ನು ಭೇದ ಮಾಡಿ ಹೋಗುವದು ಸ್ವಾಭಾವಿಕವು. ಅದನ್ನೇ ಕವಿಯು ವ್ಯಾಜಸ್ತುತ್ಯಲಂಕಾರದಿಂದ ಮನೋಹರವಾಗಿ ವರ್ಣಿಸಿದ್ದಾನೆ.

ಈ ಶ್ಲೋಕದಿಂದ ಅರಸನು ಸೂರ್ಯವಂಶದವನಿದ್ದನೆಂದು ಊಹಿಸಲು ಬರುವಂತಿದೆ.

---

* ಪ್ರತೀಪಮುಪಮಾನಸ್ಯಾಪಮೇಯತ್ವಪ್ರಕಲ್ಪನಮ್ |
ತ್ವಲ್ಲೋಚನಸಮಂ ಪದ್ಮಂ ತ್ವದ್ವಕ್ತ್ರಸದೃಶೋ ವಿಧುಃ || — ಕುವಲಯಾನಂದ

ಈ ಕಾವ್ಯದ ೧೨ ನೇ ಶ್ಲೋಕದಲ್ಲಿ ಕವಿಯು ಅರಸನ ಪ್ರತಾಪಸೂರ್ಯನು ಪ್ರಭಾತೋನ್ಮುಖನಾಗಿದ್ದನೆಂದು ಬಣ್ಣಿಸಿರುವನು ೧೪ ನೇ ಶ್ಲೋಕದಲ್ಲಿ ಸಪ್ತಗ್ರಹಗಳ ಹೆಸರುಗಳನ್ನು ತೆಗೆದುಕೊಂಡು ಅರ್ಥಾಂತರದಿಂದ ಅರಸನನ್ನು ಸರ್ವಗ್ರಹಾಶ್ರಯ ನನ್ನಾಗಿ ಮಾಡಿರುವರು ಹದಿನಾರನೆಯ ಶ್ಲೋಕದಲ್ಲಿ ಬೊಮ್ಮನ ಮನೆಯಿಂದ ಮೂಲೋಕವನ್ನು ನೋಡುವದಕ್ಕಾಗಿ ಹೊರಟು ಸರಸ್ವತಿಯು ದೇವತೆಗಳಲ್ಲಿ ಕೆಲವು ದಿವಸಗಳ ವರೆಗೆ ಇದ್ದು ಪುನಃ ಕೌತುಕದಿಂದ ಭೂಮಂಡಲದಲ್ಲಿ ಭ್ರಮಿಸಿ ರಾಜನೇ ಸತ್ಯಕ್ಕೆ ಆಗರವಾದ ನಿನ್ನ ಮುಖಾಂಬುಜದಲ್ಲಿ ಸಾಂಪ್ರತ ಸುಖವಾಗಿರುವಳೆಂದು ವರ್ಣಿಸಿರುವನು ಈ ಕಾವ್ಯದ ೨೦ನೇ ಶ್ಲೋಕದಿಂದ ಪಟ್ಟಿಶಯುದ್ಧವು ಆಗಣ ಕಾಲದಲ್ಲಿ ಪ್ರಚಾರದಲ್ಲಿ ಇದ್ದಿತೆಂದು ಗೊತ್ತಾಗುವದು

ಈ ಕಾವ್ಯದ ಇಪ್ಪತ್ತಾರನೇ ಪದ್ಯವು ಕಮನೀಯವಾಗಿರುವದು

ತ್ವಾಂ ಸುಂದರೀನಿವಹ ನಿಷ್ಠುರಧೈರ್ಯಗರ್ವ-
ನಿರ್ವಾಸನೈಕರಸಿಕಂ ಸಮರೇ ನಿರೀಕ್ಷ್ಯ ।
ಕಾವಾ ರಿಪುಕ್ಷಿತಿಭೃತಾಂ ಬತರಾಜ್ಯಲಕ್ಷ್ಮೀಃ
ಸ್ವಾಮಿವ್ರತತ್ವಮುಪರಿಸ್ಖಲಿತಂ ಬಭಾರ ।

ಎಲೈ ಕಾಮರೂಪದೇಶಾಧಿಪನೇ ಸುಂದರಿಯರ ಪಾತಿವ್ರತ್ಯವನ್ನು ಹರಣ ಮಾಡುವದರಲ್ಲಿ ರಸಿಕನಾದ ನಿನ್ನನ್ನು ನೋಡಿ ಯಾವ ವೈರಿ ಅರಸನ ರಾಜ್ಯಲಕ್ಷ್ಮಿಯು ಸ್ವಾಮಿವ್ರತವನ್ನು (ಪಾತಿವ್ರತ್ಯವನ್ನು) ತಪ್ಪದಿರುವಂತೆ ಕಾಪಾಡುವಳು ?

ಇಲ್ಲಿ ಶತ್ರುಗಳ ರಾಜ್ಯಲಕ್ಷ್ಮಿಯು ನಿನ್ನೆಡೆಗೆ ಬಂದಳೆಂಬುದೇ ವಿವಕ್ಷಿತಾರ್ಥವು. ಪಾತಿವ್ರತ್ಯಸ್ಖಲನದಿಂದ ಆಕೆ ಬಂದಳೆಂದು ಹೇಳಿದ್ದರಿಂದ ಪರ್ಯಾಯೋಕ್ತ್ಯಲಂಕಾರವು ತೋರುವದು ಆ ಪರ್ಯಾಯೋಕ್ತವು ರಾಜ್ಯಲಕ್ಷ್ಮಿಗೆ ನಾಯಿಕಾತ್ವವು ಸಿದ್ಧಿಸುವದರ ಸಲುವಾಗಿ ಸಮಾಸೋಕ್ತಿಯನ್ನು ಅಪೇಕ್ಷಿಸುವದರಿಂದ ಮತ್ತಿಷ್ಟು ಶೋಭೆ ಬಂದದೆ.

ಈ ಕಾವ್ಯದ ೩೦ ನೇ ಶ್ಲೋಕವು

ಮಹೇಂದ್ರತುಲ್ಯಂ ಕವಯೋ ಭವಂತಮ್
ವದಂತು ಕಿಂ ತಾನಿಹ ವಾರಯಾಮ ।
ಭವಾನ್ ಸಹಸ್ರೈಃ ಸಮುಪಾಸ್ಯಮಾನಃ
ಕಥಂ ಸಮಾನಸ್ತ್ರಿದಶಾಧಿಪೇನ ॥

ರಾಜಾ ! ! !-ನೀನು ಇಂದ್ರನ ಸಮಾನನೆಂದು ಕವಿಗಳು ನಿನ್ನನ್ನು ವರ್ಣಿಸುತ್ತಾರೆ, ವರ್ಣಿಸಲಿ, ಅವರಿಗೆ ನಾನೇನು ಬೇಡವೆನ್ನುವದಿಲ್ಲ; ನೀನಾದರೂ ಹೇಳು. ನೋಡುವಾ ಅವರೀ ವರ್ಣನವು ಸರಿಯಾದುದ್ದೇ ? ಆ ಇಂದ್ರನು (ತ್ರಿದಶ-ದೇವತೆ, -ಮೂರು ಹತ್ತು, ಆತನು ಮೂರು ಹತ್ತಕ್ಕೆ ಒಡೆಯನು; ನೀನು ಸಾವಿರಾರು ಜನರಿಂದ ಸೇವಿ

ಸಲ್ಪಡುವಿ. ಸಾವಿರ ಜನರ ಒಡೆಯನಾದ ನೀನು ಆ ತ್ರಿದಶಾ (ಮೂರುಹತ್ತಕ್ಕೆ) ಧಿಪತಿಗೆ ಹೇಗೆ ಸಮಾನನಾದೀ ? ಕವಿತೆಯಲ್ಲಿ ಶ್ಲೇಷದಿಂದ ಉಂಟಾದ ಮೂವತ್ತು ಜನ ಸಂಖ್ಯೆಯನ್ನು ಸ್ವೀಕರಿಸಿ *ವ್ಯತಿರೇಕಾಲಂಕಾರವು ಮನವನ್ನು ಆನಂದಪಡಿಸುವದು

ಈ ಕಾವ್ಯದ ಕಡೆಯ ಪದ್ಯವು .

ತೈಲಂಗಾನ್ವಯ ಮಂಗಲಾಲಯಮಹಾಲಕ್ಷ್ಮೀದಯಾಲಾಲಿತಃ |
ಶ್ರೀಮತ್ಪೇರಮಭಟ್ಟ ಸೂನುರನಿಶಂ ವಿದ್ವಲ್ಲಲಾಟಂತಪಃ ||
ಸಂತುಷ್ಟಃ ಕಮತಾಧಿಪಸ್ಯ ಕವಿತಾಮಾಕರ್ಣ್ಯ ತದ್ವರ್ಣನಂ |
ಶ್ರೀಮತ್ಪಂಡಿತರಾಜ ಪಂಡಿತ ಜಗನ್ನಾಥೋ ವ್ಯಧಾಸೀದಿದಂ ||

ಕಮತಾಧಿಪನಾದ ಪ್ರಾಣನಾರಾಯಣನೆಂಬ ಅರಸನ ಕವಿತೆಗಳನ್ನು ಕೇಳಿ ಸಂತುಷ್ಟನಾದ ಜಗನ್ನಾಥನು ಅವನ ವರ್ಣನಪರವಾದ ಕಾವ್ಯವನ್ನು ರಚಿಸಿದನೆಂದು ಈ ಶ್ಲೋಕದಲ್ಲಿ ಹೇಳಿದ್ದಾನೆ. ಈ ಪದ್ಯದಿಂದಲೇ ಪೂರ್ವದಲ್ಲಿ ಪ್ರಕಾಶಿತವಾಧ 'ದಿಲ್ಲೀಶ್ವರೋ ವಾ ಜಗದೀಶ್ವರೋ ವಾ' ಎಂಬ ಶ್ಲೋಕಮೂಲಕವಾದ ಆಖ್ಯಾಯಿಕೆಯ ಸತ್ಯವು ಹಗು ರಾಗುವದು ಜಗನ್ನಾಥನು ದಿಲ್ಲೀಶ್ವರನ ಹೊರತು ಉಳಿದ ಅರಸರನ್ನು ತೃಣಕ್ಕೆ ಬಗೆ ದಿದ್ದರೆ ಪ್ರಾಣನಾರಾಯಣನನ್ನೇಕೆ ಆಶ್ರಯಿಸಿದನು ? ಈ ಪದ್ಯದಲ್ಲಿ ಪಂಡಿತರಾಜ ಎಂಬ ಪದದಿಂದ ತನ್ನ ಹೆಸರನ್ನು ಉಲ್ಲೇಖಿಸಿರುವದರಿಂದ ದಿಲ್ಲೀವಲ್ಲಭ ಶ್ರಯಣೋತ್ತರ ದಲ್ಲಿ ಈ ಕಾವ್ಯವನ್ನು ರಚಿಸಿರಬೇಕೆಂದು ತಿಳಿಯಲು ಅಡ್ಡಿಯಿಲ್ಲ ಯಾಕಂದರೆ ದಿಲ್ಲೀ ಪತಿಯಾದ ಶಹಾಜಹಾನನಿಂದಲೇ ಪಂಡಿತರಾಜ ಪದವಿಯನ್ನು ಜಗನ್ನಾಥನು ಪಡೆ ದಿದ್ದಾನೆಂದು ಪ್ರಮಾಣಸಿದ್ಧವಾದ ಮಾತು

ಈ ಕಾವ್ಯವು ೫೩ ಪದ್ಯಗಳಿಂದ ಒಡಗೂಡಿದೆ ಈ ಕಾವ್ಯದಿಂದ ಜಗನ್ನಾಥನ ಅಲಂಕಾರಶಾಸ್ತ್ರಪಾರಂಗಮತೆಯು ವ್ಯಕ್ತವಾಗುವದು

## ಅಮೃತಲಹರಿ

ಈ ಕಾವ್ಯವಾದರೂ ಕಾವ್ಯಮಾಲೆಯ ಪ್ರಥಮಗುಚ್ಛದಲ್ಲಿ ಗುಂಫಿತವಾಗಿರುವದು ಈ ಕಾವ್ಯವು ಯಮುನಾವರ್ಣನಪರವಾದದ್ದು. ಈ ಕಾವ್ಯದಲ್ಲಿ ಹನ್ನೊಂದು ಶ್ಲೋಕ ಗಳಿವೆ. ಈ ಕಾವ್ಯದ ಮೊದಲನೆಯ ಪದ್ಯವು .

ಮಾತಃ ಪಾತಕಪಾತಕಾರಿಣಿ, ತವ ಪ್ರಾತಃ ಪ್ರಯಾತಸ್ತಟಂ |
ಯಃ ಕಾಲಿಂದಿ, ಮಹೇಂದ್ರನೀಲ ಪಟಲಸ್ನಿಗ್ಧಾಂ ತನುಂ ವೀಕ್ಷತೇ ||
ತಸ್ಯಾರೋಹತಿ ಕಿಂ ನಧನ್ಯಜನುಷಃ ಸ್ವಾಂತಂ ನಿತಾಂತೋಲ್ಲಸ |
ನ್ನೀಲಾಂಭೋಧರವೃಂದವಂದಿತರುಚಿರ್ದೇವೋರಮಾವಲ್ಲಭಃ ||

* ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯಯೋಃ |
ಶೈಲಾ ಇವೋನ್ನತಾಃ ಸಂತಃ ಕಿಂತು ಪ್ರಕೃತಿ ಕೋಮಲಾಃ || — ಕುವಲಯಾನಂದ

ಮಾತೇ ಯಮುನೇ ! ಪಾತಕಗಳನ್ನು ಹರಣ ಮಾಡುವ ಕಲಿಂದಪುತ್ರಿಯೆ, ಪ್ರಾತಃಕಾಲದಲ್ಲಿ ಯಾವನು ನಿನ್ನ ಪವಿತ್ರವಾದ ತೀರದಲ್ಲಿ ಬಂದು ಇಂದ್ರನೀಲರತ್ನದಂತೆ ಥಳಥಳಿಸುವ ನಿನ್ನ ಕಪ್ಪುಶರೀರವನ್ನು ನೋಡುವನೋ, ಆವನ ಸ್ಮರಣಸರಣಿಗೆ ನೀಲ ಮೇಘ ಕಾಂತಿಯುತವಾದ ಶ್ರೀಕೃಷ್ಣನು ಬರಲಿಕ್ಕೆ ಬೇಕು

ಇಲ್ಲಿ ಸ್ಮೃತ್ಯಲಂಕಾರವು ಪ್ರತಿಪಾದಿಸಲ್ಪಟ್ಟಿದೆ ಈ ಕಾವ್ಯದ ಕಡೆಯ ಪದ್ಯವು

ಅಯಂ ಪಂಡಿತರಾಜೇನ ಶ್ರೀಜಗನ್ನಾಥ ಶರ್ಮಣಾ |
ಸ್ತವಃ ಕಲಿಂದಕನ್ಯಾಯಾ ನಿರ್ಮಲೋ ನಿರಮೀಯತ ||

ಇದರಲ್ಲಿ ಪಂಡಿತರಾಜನೆಂಬ ಬಿರುದು ಉಪನ್ಯಸ್ತವಾಗಿರುವದರಿಂದ ದಿಲ್ಲೀ ಅರಸನ ಆಶ್ರಯದ ಉತ್ತರದಲ್ಲಿಯೇ ಈ ಕಾವ್ಯವಾದರೂ ರಚಿಸಲ್ಪಟ್ಟಿರಬೇಕು

ಈ ಕಾವ್ಯವನ್ನು ಬರೆಯುವಾಗ್ಗ ಜಗನ್ನಾಥನು ರಾಜಸೇವೆಯಿಂದ ನಿರ್ವಿಣ್ಣ ನಾದಂತೆ ತೋರುವದು

ದಾನಾಂಧೀಕೃತಗಂಧಸಿಂಧುರಘಟಾಗಂಡ ಪ್ರಣಾಲೀ ಮಿಲ |
ದ್ಭೃಂಗಾಲೀ ಮುಖರೀಕೃತಾಯ ನೃಪತಿದ್ವಾರಾಯ ಒದ್ಧೋಂಜಲಿಃ ||
ತ್ವತ್ತೀರೇ ಫಲಮೂಲಶಾಲಿನಿ ಮಮಶ್ಲಾಘ್ಯಾಮುರೀಕುರ್ವತೋ |
ವೃತ್ತಿಂ ಹಂತ ಮುನೇಃ ಪ್ರಯಾಂತು ಯಮುನೇ ವೀತಜ್ವರಾ ವಾಸರಾಃ ||

ಮದೋನ್ಮತ್ತವಾದ ಆನೆಗಳ ಕುಂಭಸ್ಥಳಗಳಲ್ಲಿ ಬಂದು ಕುಳಿತ ಭ್ರಮರಗಳ ಗುಂಜಾರವದಿಂದ ಮುಖರೀಕೃತವಾದ ಅರಸನ ಮಂದಿರದ ದ್ವಾರಕ್ಕೆ ದೂರದಿಂದಲೇ ನಮಸ್ಕಾರ ಮಾಡುವೆನು. ಯಮುನೇ ಇನ್ನು ಅರಸನ ಸೇವೆಯು ಸಾಕು ನಿನ್ನ ತೀರದಲ್ಲಿ ವಾಸ ಮಾಡಿ ಫಲಮೂಲಾದಿಗಳನ್ನು ಭಕ್ಷಿಸಿ ಮುನಿವೃತ್ತಿಯನ್ನು ಅಂಗೀಕರಿಸಿದ ಮುನಿಯ ದಿವಸಗಳು ಸುಖವಾಗಿ ಹೋಗಲಿ

"ಗಂಗೆಯಲ್ಲಿಯೇ ಜಗನ್ನಾಥನ ದೃಢವಾದ ಪ್ರೀತಿಯು. ಯಾಕಂದರೆ ಪಂಡಿತ ರಾಜನು ಗಂಗಾಲಹರಿಯಲ್ಲಿ 'ಕೃತಂ ಪ್ರಾಯಶ್ಚಿತ್ತೈರಲಮಥ ತಪೋದಾನವಿಭವೈಃ' ಮೊದಲಾದವುಗಳಲ್ಲಿ ಭಗವತಿಯಾದ ಭಾಗೀರಥಿಯ ಪಾಪಾಪನೋದನಪಟುತ್ವವನ್ನು ವರ್ಣಿಸಿರುವನು" ಎಂದು ಕೆಲವರು ಹೇಳುವರು. ಯಮುನಾ ವರ್ಣನದಲ್ಲಿಯೂ ಅಂತಹ ಪ್ರೀತಿವ್ಯಂಜಕ ಉಕ್ತಿಗಳುಂಟು .

ಸ್ವರ್ಣಸ್ತೇಯ ಪರಾನಪೇಯ ರಸಿಕಾನ್ ಪಾಥಃ ಕಣಾಸ್ತೇಯದಿ
ಬ್ರಹ್ಮಘ್ನಾನ್ ಗುರುತಲ್ಪಗಾನಪಿ ಪರಿತ್ರಾತುಂ ಗ್ರಹೀತವ್ರತಾಃ ||
ಪ್ರಾಯಶ್ಚಿತ್ತಕುಲೈರಲಂ ತದಧುನಾ ಮಾತಃ ಪರೇತಾಧಿಪ |
ಪ್ರೌಢಾಹಂಕೃತಿಹಾರಿ ಹುಂಕೃತಿ ಮುಖಾಮಗ್ರೇ ತವಸ್ರೋತಸಾಂ ||

ಸುವರ್ಣಚೋರರನ್ನು, ಅಪೇಯಪಾನ ಅಭಕ್ಷ್ಯಭಕ್ಷಣಮಾಡಿದವರನ್ನು, ಬ್ರಾಹ್ಮಣರನ್ನು ಕೊಂದವರನ್ನು ಗುರುಪತ್ನೀಗಮನಮಾಡಿದವರನ್ನು ರಕ್ಷಿಸಲಿಕ್ಕೆ ನಿನ್ನ

ನೀರಿನ ಕಣಗಳು ವ್ರತವನ್ನು ತೊಟ್ಟಿರುತ್ತವೆ. ಯಮುನ ಪ್ರೌಢವಾದ ಅಹಂಕಾರವನ್ನು ಹರಣ ಮಾಡುವ ಹುಂಕಾರಧ್ವನಿಗೆಯ್ಯುವ ನಿನ್ನ ಪ್ರವಾಹದ ಮುಂದೆ ಇತರ ಪ್ರಾಯಶ್ಚಿತ್ತಗಳನ್ನು ತೆಗೆದುಕೊಂಡು ಮಾಡುವದೇನು ?

## ಸುಧಾಲಹರಿ

ಈ ಕಾವ್ಯವು ಸೂರ್ಯನಾರಾಯಣಸ್ತುತಿಪರವಾದದ್ದು ಜಗನ್ನಾಥನ ಪ್ರೀತಿಯು ಅರ್ಥಾಲಂಕಾರಗಳಲ್ಲಿ ನಿರುಪಮವಾಗಿರುವಂತೆ ಶಬ್ದಾಲಂಕಾರಗಳಲ್ಲಿಯೂ ನಿರುಪಮವಾಗಿರುವದು. ಅಡಿಗಡಿಗೆ ಈ ಕಾವ್ಯದಲ್ಲಿ ಅನುಪ್ರಾಸಾಲಂಕಾರವು ಚಮಕಿಸುತ್ತಿದ್ದರೂ ಪಂಡಿತರಾಜನು ಹರಾತ್ಕಾರದಿಂದ ಪದಾಕರ್ಷಣವನ್ನು ಮಾಡಿರುವದು ತೋರುವದಿಲ್ಲ ಮಾದರಿಗಾಗಿ ಈ ಕಾವ್ಯಗಳೊಳಗಿನ ಕೆಲವು ಸುಂದರ ಪದ್ಯಗಳನ್ನು ಪ್ರಿಯ ವಾಚಕರ ಮುಂದೆ ಉದಾಹರಿಸುವೆವು ಮೊದಲನೆಯ ಶ್ಲೋಕದಲ್ಲಿ ಮಾಲೆಯಿಂದ ಹೇತ್ವಲಂಕಾರವು ಉಪನಿಬದ್ಧವಾಗಿ ಶ್ಲೋಕಕ್ಕೆ ಅತ್ಯಂತ ಸೌಭಾಗ್ಯವನ್ನುಂಟು ಮಾಡಿರುವದು :

ಉಲ್ಲಾಸಃ ಫುಲ್ಲಪಂಕೇರುಹ ಪಟಲಪತನ್ಮತ್ತ ಪುಷ್ಪಂಧಯಾನಾಂ ।
ನಿಸ್ತಾರಃ ಶೋಕದಾವಾನಲವಿಕಲಹೃದಾಂ ಕೋಕಸೀಮಂತಿನೀನಾಂ ॥
ಉತ್ಪಾತಸ್ತಾಮಸಾನಾಮುಪಹತತಮಸಾಂ ಚಕ್ಷುಷಾಂಪಕ್ಷಪಾತಃ ।
ಸಂಘಾತಃ ಕೋಪಿ ಧಾಮ್ನಾಮಯಮುದಯಗಿರಿ ಪ್ರಾಂತತಃಪ್ರಾದುರಾಸಿತ್॥

ಅಗೋ ಅಲ್ಲಿ ನೋಡಿರಿ ! ಉದಯಾಚಲದಿಂದ ಒಂದು ವಿಲಕ್ಷಣವಾದ ತೇಜಸ್ಸಿನ ರಾಶಿಯು ಹುಟ್ಟುತ್ತಿರುವದು. ಅದರಿಂದಲೆ ಅರಳಿದ ಕಮಲಗಳ ಕದಂಬದ ಮಧ್ಯದಿಂದ ಹೊರಡುವ ಮಕರಂಡದ ಪಾನದಿಂದ ಉನ್ಮಾದವನ್ನು ಹೊಂದಿದ ಭ್ರಮರಗಳ ಉಲ್ಲಾಸವು ಉಂಟಾಗುತ್ತಿರುವದು ಅದರಿಂದಲೇ ಶೋಕಾಗ್ನಿಯಿಂದ ದಗ್ಧಹೃದಯಗಳುಳ್ಳ ಕೋಕಸೀಮಂತಿನಿಯರ ದುಃಖದ ಉದ್ಧಾರವಾಗುತ್ತಿರುವದು. ಅದರಿಂದಲೇ ತಮ್ಮ ಪರಾಕ್ರಮವನ್ನೆಲ್ಲ ಕಳೆದುಕೊಂಡ ಕತ್ತಲೆಗಳ ನಾಶವಾಗುತ್ತಿರುವದು. ಅದರಿಂದಲೇ ನೇತ್ರೇಂದ್ರಿಯಕ್ಕೆ ಸಹಾಯವಾಗುತ್ತಿರುವದು ಅಹೋ ! ಎಂತಹ ತೇಜೋರಾಶಿಯಿದು!!!

ವಾಚಕರೇ ಪದ್ಮರಾಗಮಣಿಯಂತೆ ರಕ್ತವರ್ಣದಿಂದ ಶೋಭಿಸುವ ಭಾಸ್ಕರನ ಕಿರಣಗಳ ವರ್ಣನವನ್ನು ನೋಡಿರಿ !

ಆಲೇಪಾ ಹಿಂಗುಲಾನಾಮಿವ ಧರಣಿಭುಜಾಮುಚ್ಚಸೌಧಾಗ್ರ ವೌಲಿ ।
ಸ್ವಗ್ರೇಷುಕ್ಷ್ಮಾರುಹಾಣಾಮಭಿನವ ವಿಲಸತ್ಪಲ್ಲವೋಲ್ಲಾಸಲೀಲಾಃ ॥
ಪ್ರೌಢಪ್ರಾಲೇಯಪುಂಜೋಪರಿಚಿತಖದಿರಾಂಗಾರಭಾಲಾ ಇವಾರಾತ್ ।
ಪಾರಾವಾರಾತ್ಪ್ರಯಾಂತೋ ದಿನಕರಕಿರಣಾಮಂಗಲಂ ನಃ ಕೃಷೀರನ್ ॥

ಅರಮನೆಗಳ ಮೇಲೆ ಬಿದ್ದ ಸೂರ್ಯಕಿರಣಗಳು ಹಿಂಗ್ಗುಲವೆಂಬ ಧಾತುವಿನ ಲೇಪದಂತೆ ಕಾಣಿಸುತ್ತಿದ್ದವು. ವೃಕ್ಷಾಗ್ರಭಾಗದಲ್ಲಿ ಬಿದ್ದ ಕಿರಣಗಳು ಚಿಗುರೆಲೆಗಳ

ಶೋಭೆಯನ್ನು ಹೊಂದಿದ್ದವು ಹಿಮಪುಂಜದ ಮೇಲೆ ಪತಿತವಾದ ಕಿರಣಗಳು ತರೇದ ಕಟ್ಟಿಗೆಯ ಕೆಂಡದಂತೆ ತೋರುತ್ತಿದ್ದವು ಇಂತಹ ಕಿರಣಗಳು ನಮಗೆ ಮಂಗಲ ವನ್ನುಂಟು ಮಾಡಲಿ

ಕೆಳಗಣ ಪದ್ಯದಲ್ಲಿ ಕವಿಯು ಪ್ರಾಚೀದಿಗಂಗನೆಗೆ ಪುತ್ರರತ್ನವು ಹುಟ್ಟಿದ್ದರಿಂದ ಉತ್ಸವ ಉಂಟಾಯಿತೆಂದು ವರ್ಣಿಸಿರುವನು

ಕೀಲಾಲೈಃ ಕುಂಕುಮಾನಾಂ ನಿಖಿಲಮಪಿಜಗಜ್ಜಾಲಮೇತನ್ನಿಷಿಕ್ತಂ |
ಮುಕ್ತಾಶ್ಚೋನ್ಮತ್ತಭೃಂಗಾ ವಿದಲಿತ ಕಮಲಕ್ರೋಡಕಾರಾಗೃಹೇಭ್ಯಃ ||
ಉತ್ಸೃಷ್ಟಂಗೋಸಹಸ್ರಂ ಒಹುಲ ಕಲಕಲಃ ಶ್ರೂಯತೇಚದ್ವಿಜಾನಾಂ |
ಭಾಗ್ಯೈರ್ವೃಂದಾರಕಾಣಾಂ ಹರಿಹಯಹರಿತಾ ಸೂಯತೇ ಪುತ್ರರತ್ನಂ ||

ದೇವತೆಗಳ ಭಾಗ್ಯದಿಂದ ಇಂದ್ರದಿಕ್ಕೆಂಬ (ಪೂರ್ವ) ರಮಣಿಯು ಸುತನನ್ನು ಹಡೆದಳು ಎಲ್ಲ ಜಗತ್ತು ಕುಂಕುಮದ ನೀರಿನಿಂದ ಸಿಂಪಡಿಸಲ್ಪಟ್ಟಿತು. ಅರಳಿದ ಅರ ವಿಂದಗಳೆಂಬ ಕಾರಾಗಾರದಿಂದ ಭ್ರಮರಗಳು ಬಿಡಲ್ಪಟ್ಟವು ಸಾವಿರಾರು ಗೋಗಳನ್ನು ದಾನ ಮಾಡಿದರು ದ್ವಿಜಗಳ (ಬ್ರಾಹ್ಮಣ, ಪಕ್ಷಿ) ಕಲಕಲವು ಕೇಳಲ್ಪಟ್ಟಿತು

ಈ ಕಾವ್ಯದಲ್ಲಿ ಅನುಪ್ರಾಸಬಾಹುಲ್ಯವು ಮೇಲಿಂದ ಮೇಲೆ ಕಂಡುಬರುವದು ಅದರಲ್ಲಿ ವಿಶೇಷವಾಗಿ ಕೆಲವು ಶ್ಲೋಕಗಳಲ್ಲಿ ಕಂಡುಬರುವದು

ಗಿರ್ವಾಣಗ್ರಾಮಣೀಭಿರ್ಗಗನತಲಗತೈರ್ಗೀರ್ಭಿರುದ್ಗೀಥ ಗಾಭಿಃ |
ಗಂಧರ್ವೈರ್ಶಾಪಿಗೀತಾ ಗುಣಗಣಗರಿಮೋದ್ಗಾರಿ ಗಾಥಾಸಹಸ್ರೈಃ |
ಗಾಹಂ ಗಾಹಂ ಗೃಹಾಲೀರಗತಿಕಗದಿನಾಂ ಗಂಧಯಂತೋಗದಾರ್ತಿಂ |
ಗ್ಲಾನಿಗ್ರಾಮಂ ಗ್ರಸಂತಾಂ ಗ್ರಹರುಚಿ ಗುರವೋ ಗೋಪತೇರ್ಗೋವಿಲಾಸಾಃ||

ದೇವತೆಗಳಿಂದಲೂ ಗಂಧರ್ವರಿಂದಲೂ ಗಾಯನಗಳಿಂದ ಹೊಗಳಲ್ಪಡುವ ಮನೆ ಮನೆಗಳಲ್ಲಿ ಸೇರಿ ರೋಗಿಗಳ ರೋಗೋಪದ್ರವವನ್ನು ನಾಶ ಮಾಡುವ ಇತರ ಗ್ರಹಗಳಿಗೆ ಕಾಂತಿಯನ್ನುಂಟುಮಾಡುವ ಸೂರ್ಯಕಿರಣಗಳು ನಮ್ಮ ಆಲಸ್ಯವನ್ನು ಹೊಡೆ ದೋಡಿಸಲಿ

ಜೀವಾತುರ್ಜಾಡ್ಯ ಜಾಲಾಧಿಕ ಜನಿತರುಜಾಂ ತಪ್ತಜಾಂಬೂನದಾಭಂ |
ಜಂಘಾಲಂ ಜಾಂಘಿಕಾನಾಂ ಜಲಧಿಜಠರತೋ ಜೃಂಭಮಾಣಂ ಜಗತ್ಯಾಂ |
ಜೀವಾಧಾನಂ ಜನಾನಾಂ ಜನಿತಮಧರುಚೋ ಜೀವಜೈವಾತೃಕಾದೇಃ |
ಜ್ಯೋತಿರ್ಜಾಜ್ವಲ್ಯಮಾನಂ ಜನಜಹಿತಕೃತೋ ಜಾಯತಾಂ

ಪ್ರೋಜಯಾಯ

ಜಾಡ್ಯದಿಂದ ಹುಟ್ಟಿದ ರೋಗಕ್ಕೆ ಜೀವನೌಷಧಿಯೂ, ತಪ್ತಸುವರ್ಣದಂತೆ ಕಾಂತಿಮಂತವಾದುದೂ, ವೇಗವುಳ್ಳವುಗಳಲ್ಲಿ ವೇಗವುಳ್ಳದ್ದೂ, (ಪ್ರಕಾಶವು ತೀವ್ರ

ವೇಗವುಳ್ಳದ್ದು) ಸಮುದ್ರದ ಮಧ್ಯದಿಂದ ಜಗತ್ತಿನಲ್ಲಿ ಪ್ರಕಾಶವನ್ನು ಹೊಂದತಕ್ಕದ್ದೂ, ಜನರ ಜೀವನಾಧಾರವೂ, ಚಂದ್ರಬೃಹಸ್ಪತ್ಯಾದಿ ಗ್ರಹಗಳ ಪ್ರಕಾಶ ಜನಕವೂ ಕಮಲ ಗಳಿಗೆ ಹಿತವನ್ನುಂಟುಮಾಡುವದೂ, ಆದ ಸೂರ್ಯನ ಜಾಜ್ವಲ್ಯಮಾನವಾದ ಜ್ಯೋತಿಯು ನಿಮಗೆ ಜಯವನ್ನುಂಟುಮಾಡಲಿ.

ಈ ಕಾವ್ಯದಲ್ಲಿ ಒಟ್ಟು ಮೂವತ್ತು ಪದ್ಯಗಳಿವೆ ಇದಕ್ಕೆ ಟೀಕೆಯಿಲ್ಲ ಟಿಪ್ಪಣಿ ಯಿಲ್ಲ ಕಾವ್ಯಮಾಲೆಯ ಪ್ರಥಮಗುಚ್ಛದಲ್ಲಿ ಗುಂಫಿತವಾಗಿರುವದು

## ಪೀಯೂಷಲಹರಿ

## (ಗಂಗಾಲಹರಿ)

ಈ ಲಹರಿಯು ಅತೀವಪ್ರಥಿತವಾದುದು, ಇದರಲ್ಲಿಯ ಸರಸಸರಲವಾದ ಸರಣಿ ಯಿಂದ ಅನೇಕರು ಮೋಹಗೊಂಡಿದ್ದಾರೆ ಇದು ಅನೇಕ ಜನರ ಮುಖಸ್ಥವಾಗಿರುತ್ತದೆ ಇದರಲ್ಲಿಯ ಮೊದಲನೆಯ ಪದ್ಯವಿದು. ವಾಚಕರೇ, ಸಾವಧಾನದಿಂದ ಪಂಡಿತರಾಜನ ಅಮೃತಮಯವಾದ ವಾಣಿಯನ್ನು ಕೇಳಿರಿ :

ಸಮೃದ್ಧಂ ಸೌಭಾಗ್ಯಂ ಸಕಲವಸುಧಾಯಾಃ ಕಿಮಪಿತನ್
ಮಹೈಶ್ವರ್ಯಂ ಲೀಲಾಜನಿತಜಗತಃ ಖಂಡಪರಶೋಃ |
ಶ್ರುತೀನಾಂ ಸರ್ವಸ್ವಂ ಸುಕೃತ ಮಧಮೂರ್ತಂ ಸುಮನಸಾಂ
ಸುಧಾಸೋದರ್ಯಂ ತೇ ಸಲಿಲಮಶಿವಂ ನಃ ಶಮಯತು ||

ಮಾತೇ ಗಂಗೇ ! ನಿನ್ನ ಜಲದ ಮಾಹಾತ್ಮ್ಯವನ್ನು ಎಷ್ಟೆಂದು ವರ್ಣಿಸುವ ! ವೃದ್ಧಿಂಗತವಾದ ಪೃಥ್ವಿಯ ಮಹದ್ಭಾಗ್ಯವೇ ಇದು ಲೀಲೆಯಿಂದ ಜಗವನ್ನು ಹುಟ್ಟಿ ಸುವ ಸಾಕ್ಷಾತ್ ಶಂಕರನ ಐಶ್ವರ್ಯವೇ ಈ ಜಲವು ವೇದಗಳ ಸರ್ವಸ್ವವು ದೇವತೆಗಳ ಪ್ರತ್ಯಕ್ಷ ಪುಣ್ಯವು ಸುಧೆಯ ಸೋದರವು. ಇಂತಹ ನಿನ್ನ ಜಲವು ನಮ್ಮ ಅಕಲ್ಯಾಣ ವನ್ನು ನಾಶ ಮಾಡಲಿ.

ಈ ಕಾವ್ಯದಲ್ಲಿದ್ದ ಇದೊಂದೇ ಪದ್ಯವನ್ನು ನೋಡಿದರೆ ಸಾಕು ಪಂಡಿತರಾಜನ ಅಸಾಮಾನ್ಯ ಕವಿತ್ವಶಕ್ತಿಯು ಗೊತ್ತಾಗುವದು ಈ ಪದ್ಯದಲ್ಲಿ ಹೇತ್ವಾದ್ಯಲಂಕಾರಗಳು ಸಂಸ್ಕೃಷ್ಟವಾಗಿವೆ. ಮನೋಹರವಾದ ವೈದರ್ಭೀ ರೀತಿಯು ಕಂಗೊಳಿಸುವದು ಸಹೃದಯ ಹೃದಯಹಾರಿಯಾದ ಪ್ರಸಾದಗುಣವು ಶೋಭಿಸುತ್ತಿರುವದು. ಏನು ರಚನೆಯ ಅಕ್ಲಿಷ್ಟತೆಯೋ ! ! ! ಏನು ಮಾಧುರ್ಯವೋ ! ! !

ಈ ಕಾವ್ಯದ ನಾಲ್ಕನೇ ಪದ್ಯವನ್ನು ನೋಡಿದರೆ ಪಂಡಿತರಾಜನು ಎಷ್ಟು ವಿನೀತ ನಾಗಿರುವನು ಎಂಬುದು ಕಂಡುಬರುವದು :

ತವಾಲಂಬಾದಂಬ ಸ್ಫುರದಲಘುಗರ್ವೇಣ ಸಹನಾ ||
ಮಯಾಸರ್ವೇಽವಜ್ಞಾಸರಣಿಮಥನೀತಾಃ ಸುರಗಣಾಃ ||
ಇದಾನೀಮೌದಾಸ್ಯಂ ಭಜಸಿಯದಿ ಭಾಗೀರಥಿ ತದಾ ||
ನಿರಾಧಾರೋ ಹಾ ರೋದಿಮಿ ಕಥಯ ಕೇಷಾಮಿಹ ಪುರಃ ||

ಹೇ ಮಾತೇ ಗಂಗೇ! ನಿನ್ನ ಆಶ್ರಯದಿಂದಲೇ ನಾನು ಅಖರ್ವಗರ್ವವನ್ನು ತಳೆದು ಉಳಿವ ದೇವತೆಗಳನ್ನು ತೃಣಕ್ಕೆ ಬಗೆದೆನು ಈ ಕಾಲದಲ್ಲಿ ನೀನೂ ಔದಾಸೀನ್ಯ ವನ್ನು ತಳೆದು ನನ್ನನ್ನು ಉದ್ಧಾರ ಮಾಡುವದನ್ನು ಬಿಟ್ಟರೆ ನಾನಿನ್ನು ಯಾರ ಮುಂದ ಅಳಬೇಕು!!!

ಪಂಡಿತರಾಜನ ವರ್ಣನ ಶೈಲಿಯನ್ನು ನೋಡಿರಿ

ಪ್ರಭಾತೇ ಸ್ನಾತೀನಾಂ ನೃಪತಿರಮಣೀನಾಂ ಕುಚತಟೀ!
ಗತೋ ಯಾವನ್ಮಾತರ್ಮಿಲತಿ ತವತೋಯೈರ್ಮೃಗಮದಃ ||
ಮೃಗಾಸ್ತಾವದ್ವೈಮಾನಿಕೆ ಶತಸಹಸ್ರೈಃ ಪರಿವೃತಾ |
ವಿಶಂತಿ ಸ್ವಚ್ಛಂದಂ ವಿಮಲವಪುಷೋ ನಂದನವನಂ ||

ಓ ಭಾಗೀರಥೀ, ಪ್ರಭಾತ ಕಾಲದಲ್ಲಿ ನಿನ್ನ ಜಲದಲ್ಲಿ ಸ್ನಾನ ಮಾಡತಕ್ಕ ನೃಪ ರಮಣಿಯರ ಕುಚಗಳಿಗೆ ಲೇಪಿಸಿದ ಕಸ್ತೂರಿಯು ನಿನ್ನ ಜಲದೊಡನೆ ಕೂಡಿಕೊಳ್ಳಲು ಅಂತಹ ಕಸ್ತೂರಿಯನ್ನಿತ್ತ ಕಸ್ತೂರೀಮೃಗಗಳು ವಿಮಾನದಲ್ಲಿ ಕುಳಿತು ಸ್ವಚ್ಛಂದವಾಗಿ ನಂದನವನಕ್ಕ ತೆರಳುವವು ಇಲ್ಲಿದ್ದ ಹೃದಯಂಗಮವಾದ ಅತಿಶಯೋಕ್ತಿಯು ಯಾರ ಮನಸ್ಸನ್ನು ಆನಂದಪಡಿಸಲಿಕ್ಕಿಲ್ಲ?

ಇನ್ನೊಂದು ಶ್ಲೋಕವನ್ನು ನೋಡಿರಿ ಇದರಲ್ಲಿ ಉಪಸರ್ಗದಿಂದ ಧಾತ್ವರ್ಥವು ಬದಲಾಗುವದನ್ನು ಉದಾಹರಿಸಿದ್ದಾನೆ

ನಿಧಾನಂ ಧರ್ಮಾಣಾಂ ಕಿಮಪಿಚ ವಿಧಾನಂ ನವಮ್ಮುದಾಂ |
ಪ್ರಧಾನಂ ತೀರ್ಥಾನಾಮಮಲ ಪರಿಧಾನಂ ತ್ರಿಜಗತಃ ||
ಸಮಾಧಾನಂ ಬುದ್ಧೇರಥ ಖಲು ತಿರೋಃಧಾನಮಧಿಯಾಂ |
ಶ್ರಿಯಾಮಾಧಾನಂ ನಃ ಪರಿಹರತು ತಾಪಂ ತವವಪುಃ ||

ಪಂಡಿತರಾಜನು ಅರಸರ ಸೇವೆಯಿಂದ ನಿರ್ವಿಣ್ಣನಾಗಿದ್ದಾನೆಂದು ಕೆಳಗಣ ಶ್ಲೋಕ ದಿಂದ ತಿಳಿಯುವದು

ಪುರೋಧಾವಂ ಧಾವಂ ದ್ರವಿಣಮದಿರಾ ಘೂರ್ಣಿತದೃಶಾಂ |
ಮಹೀಪಾನಾಂ ನಾನಾತರುಣತರಖೇದಾತಿ ನಿಯತಂ ||
ಮಮೈವಾಯಂ ಮಂತುಃ ಸ್ವಹಿತಶತ ಹಂತುರ್ಜಡಧಿಯೋ |
ವಿಯೋಗಸ್ತೇ ಮಾತರ್ಯದಿಹ ಕರುಣಾತಃ ಕ್ಷಣಮಪಿ ||

ಐಶ್ವರ್ಯದಿಂದ ಮದೋಮನ್ಮತ್ತರಾದ ಅರಸರ ಮುಂದೆ ಗಂಗೇ! ಓಡಾಡಿ ಬೇಸತ್ತೆನು. ಅದರಿಂದ ನನಗೆ ಪ್ರಬಲವಾದ ದುಃಖವೇ ಆಯಿತಲ್ಲದೆ ಸುಖವೇನು ಸಿಗಲಿಲ್ಲ ನಿನ್ನ ಸ್ತೋತ್ರವನ್ನು ಮಾಡದೆ ನಿನ್ನ ಕಾರುಣ್ಯದಿಂದ ವಿಯೋಗವನ್ನು ಹೊಂದಿದೆನು ಇದು ಯಾರ ಅಪರಾಧವು? ಮಂದಬುದ್ಧಿಯಾದ ಆತ್ಮಹಿತಘಾತುಕನಾದ ನನ್ನ ಅಪರಾಧವಲ್ಲದೆ ಮತ್ತಾರದು?

ಈ ಮೇರೆಗೆ ಸುಧೆಯ ಮಾಧುರ್ಯವನ್ನು ಧಿಕ್ಕರಿಸಿದ ವಚನಪರಂಪರೆಯಿಂದ ಗಂಗೆಯನ್ನು ಸ್ತುತಿಸಿ ಕಡೆಗೆ,

ಬಧಾನ ಪ್ರಾಗೇವ ದೃಢಿಮರಮಣೀಯಂ ಪರಿಕರಂ |
ಕಿರೀಟೇ ಬಾಲೇಂದುಂ ನಿಯಮಯ ಪುನಃ ಪನ್ನಗಗಣೈಃ ||
ನ ಕುರ್ಯಾಸ್ತ್ವಂ ಹೇಲಾಮಿತರಜನಸಾಧಾರಣತಯಾ |
ಜಗನ್ನಾಥಸ್ಯಾಯಂ ಸುರುಧುನಿ ! ಸಮುದ್ಧಾರ ಸಮಯಃ ||

ಮಾತೇ ಏಳು, ತೀವ್ರವಾಗಿ ಟೊಂಕ ಕಟ್ಟಿಕೊಂಡು ನಿಲ್ಲು. ಕಿರೀಟದಲ್ಲಿ ಬಾಲ ಚಂದ್ರನನ್ನು ಇಟ್ಟುಕೊಂಡು ಪನ್ನಗಗಣದಿಂದೊಡಗೂಡಿ ಉತ್ಥಿತಳಾಗು. ಸಾಧಾರಣರಾದ ಇತರ ಜನರಂತೆ ತಿರಸ್ಕಾರವನ್ನು ಮಾಡಬೇಡ. ಜಗನ್ನಾಥನ ಉದ್ಧಾರಸಮಯವು ಈಗುಂಟು.

## ಲಕ್ಷ್ಮೀಲಹರಿ

ಸರಸವಾದ ಶಿಖರಿಣೀವೃತ್ತದ ಪದ್ಯಗಳಿಂದ ಒಡಗೂಡಿದ ರಮೆಯ ಸ್ತುತಿಪರವಾದ ಈ ಕಾವ್ಯವೂ ಜಗನ್ನಾಥನ ಅತುಲ ಕಲ್ಪನಾಶಕ್ತಿಯನ್ನೂ, ಅಲೌಕಿಕ ಪ್ರತಿಭೆಯನ್ನೂ ಅಚುಂಬಿತ ವರ್ಣನಾಸಾಮರ್ಥ್ಯವನ್ನೂ ವ್ಯಕ್ತಗೊಳಿಸುವದು. ಈ ಕಾವ್ಯದ ಮೊದಲನೆಯ ಪದ್ಯವು .

ಸಮುನ್ಮೀಲನ್ನೀಲಾಂಬುಜನಿಕರನೀರಾಜಿತರುಚಾ-
ಮಪಾಂಗಾನಾಂ ಭಂಗೈರಮೃತಮಸೃಣೀಶ್ರೇಣಿಮಸೃಣೈಃ ||
ಕ್ರಿಯಾಹೀನಂ ದೀನಂ ಭೃಶಮುದರಲೀನಂ ಕರುಣಯಾ |
ಹರಿಶ್ಯಾಮಾ ಸಾಮಾಮವತು ಜಡಸಾಮಾಜಿಕಮಪಿ ||

ಜಗನ್ನಾಥನ ಪದ್ಯಗಳು ಸರಲವಾದವುಗಳೂ, ಪ್ರಾಸಬದ್ಧವಾದವುಗಳೂ ಇರುತ್ತವೆಂಬುದಕ್ಕೆ ಇದೊಂದೇ ಶ್ಲೋಕದ ಉದಾಹರಣವು ಸಾಕು ಅರಳಿದ ನೀಲಕಮಲಗಳ ಕಾಂತಿಯನ್ನು ಹರಣ ಮಾಡುವ (ಕಟಾಕ್ಷದ ಕಾಂತಿಯು ನೀಲವಾಗಿರುತ್ತದೆಂಬುದು ಕವಿಸಮಯ) ಅಮೃತವನ್ನು ಸಿಂಪಡಿಸುವ ಕಟಾಕ್ಷಗಳಿಂದ, ನಾಚಿಕೆಯಿಂದ ಹೀನನೂ, ದೀನನೂ, ಜಡನೂ ಆದ ಪಶುವನ್ನು ರಮೆಯು ಕರುಣೆಯಿಂದ ಕಾಪಾಡುವಳೇ? ನೋಡಿರಿ. ಪಂಡಿತರಾಜನು ಎಷ್ಟು ಮೆತ್ತಗೆ ಆಗಿದ್ದಾನೆ. ಸರಸ್ವತಿಯು ತನ್ನ ವೀಣೆ

ಯನ್ನು ಬಾರಿಸುವದನ್ನು ಬಿಟ್ಟು ಪಂಡಿತರಾಜನ ಕವಿತೆಯನ್ನು ಕೇಳಿದಳು ಲಕ್ಷ್ಮಿಯು ವಶವಾಗಲಿಲ್ಲೇ ? ಆಕೆಯ ಮುಂದೆ ಇಷ್ಟು ದೀನತೆ ಯಾಕೆ ?

ಭವಭೂತಿಯ ಶಿಖರಿಣಿಯು ಮನೋಹರವಾಗಿರುವದೆಂದು ಹೇಳುವರಲ್ಲವೇ ? ಜಗನ್ನಾಥನ ಶಿಖರಣಿಯಲ್ಲಿ ಮನೋಹರತೆ ಏನು ಕಡಿಮೆ ? ಇಲ್ಲಿಯೂ ಅರ್ಥಗೌರವ ವಿದೆ, ಅಲಂಕಾರಸೌಭಾಗ್ಯವು ತುಂಬಿ ತುಳುಕುವದು, ಲಕ್ಷ್ಮೀಲಹರಿಗಿಂತ ಗಂಗಾ ಲಹರಿಯಲ್ಲಿ ವಂಶವದಯಾದ ರಮಣಿಯಂತೆ ಶಿಖರಣಿಯು ಜಗನ್ನಾಥನನ್ನು ಅನು ಸರಿಸಿರುವನು

ಈ ಲಹರಿಯಲ್ಲಿ ಒಂದು ಶ್ಲೋಕದಲ್ಲಿ ಜಗನ್ನಾಥನು ಲಕ್ಷ್ಮಿಯ ಕೃಪಾಕಟಾಕ್ಷವು ಯಾವನಲ್ಲಿ ಬೀಳುವದೋ, ಅವನನ್ನು ಗಂಗಾಧರಾದಿ ದೇವತೆಗಳೆಲ್ಲರು ಸ್ತುತಿಸುತ್ತಾ ರೆಂದು ಹೇಳಿದ್ದಾನೆ ಮತ್ತೊಂದು ಪದ್ಯದಲ್ಲಿ ವಿಷ್ಣುವಿನ ದೃಷ್ಟಿಯು ಲಕ್ಷ್ಮಿಯ ಜಂಘಾಯುಗಲಮಧ್ಯದಲ್ಲಿ ನೀರಾಜನದಂತೆ ತಿರುಗಾಡುತ್ತದೆಂದು ವರ್ಣಿಸಿ ತನ್ನ ಕಾವ್ಯಕ್ಕೆ ಒಂದಿಷ್ಟು ಅನುಚಿತತ್ವವನ್ನು ತಂದುಕೊಂಡಿದ್ದಾನೆ

ಕಾರಣಗುಣಗಳು ಕಾರ್ಯದಲ್ಲಿ ಬರುತ್ತವೆಂದು ಶಾಸ್ತ್ರಜ್ಞರ ಅಭಿಪ್ರಾಯ ವೇದಾಂತಿಗಳು ಶ್ರುತಿವಚನವನ್ನು ಪ್ರಮಾಣೀಕರಿಸಿ ಜಗತ್ತಿನ ಮಿಥ್ಯಾತ್ವವನ್ನು ಪ್ರತಿ ವಾದಿಸುತ್ತಾರೆ ಜಗತ್ತಿಗೆ ಯಾವದು ಕಾರಣವಾಗಿರುವದೋ ಅದು ಮಿಥ್ಯೆಯಾಗಿರ ತಕ್ಕದ್ದು ಅಂತಹ ಕಾರಣವನ್ನು ಕಾಣದಲೆ ಜಗತ್ತು ಮಿಥ್ಯೆಯೆಂದು ಪ್ರತಿವಾದಿಸುವ ವೇದವಚನಗಳಲ್ಲಿ ಸಂದೇಹವುಳ್ಳವನಾಗಿರಲು ಜಗನ್ಮಾತೆಯಾದ ಲಕ್ಷ್ಮಿಯ ಗಗನಸದೃಶ ವಾದ ಉದರವು ದೃಗ್ಗೋಚರವಾಯಿತು ಅಲ್ಲಿಂದ ಜಗನ್ಮಾತೆಯಾದ ಲಕ್ಷ್ಮಿಯ ಉದರವೇ ಮಿಥ್ಯೆಯಾದ ಮೇಲೆ ಅದರಿಂದ ಹುಟ್ಟಿದ ಜಗತ್ತು ಹೇಗೆ ಸತ್ಯವಾದೀತು ? ನನ್ನ ಶಂಕೆಯು ನಿರಸನವಾಯಿತು ಎಂದು ಜಗನ್ನಾಥನು ಕೆಳಗಣ ಶ್ಲೋಕದಲ್ಲಿ ಹೇಳಿದ್ದಾನೆ .

ಜಗನ್ಮಿಥ್ಯಾಭೂತಂ ಮಮಾನಿಗದತಾಂ ವೇದವಚಸಾ-
ಮಭಿಪ್ರಾಯೋ ನಾದ್ಯಾವಧಿ ಹೃದಯಮಧ್ಯಾವಿಶದಯಮ್
ಇದಾನೀಂ ವಿಶ್ವೇಷಾಂ ಜನಕಮುದರಂ ತೇ ವಿಮೃಶತೋ
ವಿಸಂದೇಹಂ ಚೇತೋಽಜನಿ ಗರುಡಕೇತೋಃ ಪ್ರಿಯತಮೇ ||

ಲಕ್ಷ್ಮೀಲಹರಿಯಲ್ಲಿ ಶಬ್ದಾಲಂಕಾರಗಳೂ ಮೇಲಿಂದಮೇಲೆ ಪ್ರತ್ಯಕ್ಷವಾಗುತ್ತವೆ ಕಡೆಗೆ ಜಗನ್ನಾಥನು ಲಕ್ಷ್ಮಿಯನ್ನು ಈ ಮೇರೆಗೆ ಪ್ರಾರ್ಥಿಸುತ್ತಾನೆ

ಎಲೌ ತಾಯೀ ! ' ಲಕ್ಷ್ಮೀ, ನಿನ್ನ ಚರಣತಲದಲ್ಲಿ ಅಳುತ್ತ ಹೊರಳಾಡುತ್ತ ಬಿದ್ದಿರುವ ಈ ಬಾಲಕನನ್ನು ಅಮೃತದಿಂದ ಆರ್ದ್ರವಾದ ನಿನ್ನ ಕರಗಳಿಂದ ಮುಟ್ಟುತ್ತ 'ಚಿಕ್ಕಾ' 'ಅಳಬೇಡ' ಎಂದು ಪ್ರೀತಿಯಿಂದಾಗಿ ಸಮಾಧಾನಪಡಿಸುವಿ ?

## ಭಾಮಿನೀವಿಲಾಸ

ಜಗನ್ನಾಥರಾಯನಿಂದ ವಿರಚಿತವಾದ ಮುಕ್ತಕಪದ್ಯಗಳ ಸಂಗ್ರಹರೂಪವಾದ ಪ್ರಬಂಧವಿದು ಇದನ್ನು ಬರೆದಿಡುವ ಪ್ರಯೋಜನವೇನೆಂಬದನ್ನು ಜಗನ್ನಾಥನು ತಾನೇ ಹೇಳುತ್ತಾನೆ

ದುರ್ವೃತ್ತಾ ಜಾರಜನ್ಮಾನೋ ಹರಿಷ್ಯಂತೀತಿ ಶಂಕಯಾ |
ಮದೀಯ ಪದ್ಯರತ್ನಾನಾಂ ಮಂಜೂಷೈಷಾ ಕೃತಾ ಮಯಾ ||

"ತುಡುಗಸುಳೀಮಕ್ಕಳು ಹರಣ ಮಾಡುತ್ತಾರೆಂಬ ಶಂಕೆಯಿಂದ ನನ್ನ ಪದ್ಯಗಳೆಂಬ ರತ್ನಗಳನ್ನು ಈ ಪೆಟ್ಟಿಗೆಯಲ್ಲಿ ತುಂಬಿ ಇಟ್ಟಿರುವೆನು"

'ಭಾಮಿನೀವಿಲಾಸವೆಂದು ಹೆಸರಿಡಲು ಕಾರಣವೇನು? ತನ್ನ ಅಂಗನೆಯಾದ ಭಾಮಿನಿಯ ವಿಲಾಸವನ್ನು ಕುರಿತು ಈ ಗ್ರಂಥವನ್ನು ಪಂಡಿತರಾಜನು ಬರೆದಿದ್ದರಿಂದ 'ಭಾಮಿನೀವಿಲಾಸ'ವೆಂದು ಹೆಸರಿಟ್ಟನೆಂದು ಕೆಲವರು ಹೇಳುತ್ತಿರುವರು. ಹಲವರು ಈ ಸಂಜ್ಞೆಯು ಐಚ್ಛಿಕವೆಂದು ಉಸುರುವರು ಭಾಮಿನೀವಿಲಾಸದಲ್ಲಿರುವ ಪದ್ಯಗಳೆಲ್ಲ ಪ್ರಾಯಃ ಪಂಡಿತರಾಜನಿಂದ ವಿರಚಿತವಾದ ರಸಗಂಗಾಧರದಲ್ಲಿ ಕಂಡುಬರುವವು. ಉದಾಹರಣಾರ್ಥವಾಗಿಯೇ ಅವನ್ನು ನಿರ್ಮಿಸಿರಬೇಕೆಂದು ರಸಗಂಗಾಧರದ ಆರಂಭದಲ್ಲಿರುವ 'ನಿರ್ಮಾಯನೂತನಮುದಾಹರಣಾನುರೂಪಕಾವ್ಯಂ' ಎಂಬ ಪ್ರತಿಜ್ಞೆಯಿಂದ ಕಂಡುಬರುವದು.

ಈ ಪ್ರಬಂಧದಲ್ಲಿ ನಾಲ್ಕು ಉಲ್ಲಾಸಗಳು . ಅನ್ಯೋಕ್ತಿ, ಶೃಂಗಾರ, ಕರುಣ, ಶಾಂತ. ಪಂಡಿತರಾಜನ ಅಸಾಮಾನ್ಯ ಕವಿತ್ವದ ಪರಿಚಯವನ್ನು ಇದೊಂದೇ ಪ್ರಬಂಧವು ಮಾಡಿಕೊಡುವಂತಿರುವದು

ಕರುಣಾವಿಲಾಸದ ಪ್ರಣಯನ ಸಮಯದಲ್ಲಿ ಅಥವಾ ಅದಕ್ಕೂ ಮುಂಚೆ ಅವನ ಪ್ರಿಯತಮೆಯಾದ ಅಂಗನೆಯು ತೀರಿಕೊಂಡಿರುವದು ಈ ಉಲ್ಲಾಸದಿಂದ ಸೂಚಿತವಾಗುತ್ತದೆಂದು ಕೆಲವರು. ಪಂಡಿತ ದುರ್ಗಾಪ್ರಸಾದರು ರಸಗಂಗಾಧರದಲ್ಲಿ ಪಂಡಿತರಾಜನ (ಹಾ ತನಯವಿನಯಶಾಲಿನ್! ಕಥಮಿವ ಪರಲೋಕಪಥಿಕೋ ಭೂಃ) ಈ ಶ್ಲೋಕದಿಂದ ಪಂಡಿತರಾಜನ ಪುತ್ರಮರಣವಾದರೂ ಯಾಕೆ ಅನುಮಿತವಾಗುವದಿಲ್ಲವೆಂದು ಆಕ್ಷೇಪಿಸುತ್ತಾರೆ. ಹ್ಯಾಗೇ ಆಗಲಿ, ಈ ಉಲ್ಲಾಸವು ಅತ್ಯಂತ ಕರುಣಾರಸ ಪರಿಪ್ಲುತವಾಗಿದೆ. ಕಲ್ಲೆದೆಯವರ ಹೃದಯವನ್ನು ಕೂಡ ಕರಗಿಸುವಂತಿದೆ. ಕಾಲಿದಾಸನ ಅಜರತಿವಿಲಾಪದಂತೆ ಜಗನ್ನಾಥನ ಈ ವಿಲಾಪವಾದರೂ ಅತ್ಯಂತವಾಗಿ ಹೃದಯಂಗಮವಾಗಿರುವದು. ಜಗನ್ನಾಥನ ಮೃದುಮಧುರವಾದ ಪದಗಳು, ಮನೋರಮವಾದ ವಸಂತತಿಲಕಾವೃತ್ತ, ವಾಚಕರನ್ನು ತಲ್ಲೀನವಾಗಿ ಮಾಡಿಬಿಡುವವು ಈ ಉಲ್ಲಾಸದ ಮೊದಲನೇ ಶ್ಲೋಕವು..

ದೈವೇ ಪರಾಙ್ಮುಖಸಶಾಲಿನಿ ಹಂತ ಜಾತೇ |
ಯಾತೇ ಚ ಸಂಪ್ರತಿ ದಿವಂ ಪ್ರತಿ ಬಂಧುರತ್ನೇ ||
ಕಸ್ಮೈ, ಮನಃ ಕಥಯಿತಾಸಿ ನಿಜಾಮವಸ್ಥಾಂ |
ಕಃ ಶೀತಲೈಃ ಶಮಯಿತಾ ವಚನೈಸ್ತವಾಧಿಮ್ ||

"ದೈವವು ಪರಾಙ್ಮುಖವಾಯಿತು ಬಂಧುರತ್ನವು ಸ್ವರ್ಗಕ್ಕೆ ಹೋಯಿತು, ಹೇ ಮನಸ್ಸೇ ಇನ್ನು ಆರವುುಂದೆ ನಿಜಾವಸ್ಥೆಯನ್ನು ಹೇಳುವಿ ? – ಇನ್ನಾರು ತಂಪಾದ ವಚನಗಳಿಂದ ನಿನ್ನ ಆಧಿಯನ್ನು ಶಾಂತಪಡಿಸುವರು ?"

ಮತ್ತೊಂದು ಪದ್ಯದಲ್ಲಿ– ಪಂಡಿತರಾಜನು ಆ ಪ್ರಿಯತಮೆಯು ಕರ್ಪೂರದಂತೆ ಕಣ್ಣಿನ ತಾಪವನ್ನು ಹೋಗಲಾಡಿಸುವವಳು. ಅರಳಿದ ಕಮಲಗಳ ಮಾಲೆಯಂತೆ ಕಂಠಸುಖಕ್ಕೆ ಕಾರಣಳೂ, ನನ್ನ ಕವಿತೆಯಂತೆ ಮನೋಹರಳೂ ಆಗಿದ್ದಳೆಂದು ವರ್ಣಿಸಿರುವನು.

## ಚಿತ್ರಮೀಮಾಂಸಾಖಂಡನ

ಅಪ್ಪಯ್ಯದೀಕ್ಷಿತರಿಂದ ವಿರಚಿತವಾದ ಚಿತ್ರಮೀಮಾಂಸೆಯನ್ನು ಪಂಡಿತರಾಜನು ಖಂಡಿಸಿದ್ದಾನೆ. ತಾನು ಅಪ್ಪಯ್ಯದೀಕ್ಷಿತರ ಕೃತಿಯಲ್ಲಿ ತೋರಿಸಿದ ದೋಷಗಳು ದುರುದ್ಧರವಾಗಿರುವವೆಂದು ಪಂಡಿತರಾಜನು ಆ ಗ್ರಂಥದ ಆರಂಭದಲ್ಲಿ ಹೇಳುತ್ತಾನೆ.

ಸೂಕ್ಷ್ಮಂ ವಿಭಾವ್ಯಮಯಕಾಸಮುದೀರಿತಾನಾಂ |
ಅಪ್ಪಯ್ಯದೀಕ್ಷಿತಕೃತಾವಿಹದೂಷಣಾನಾಂ ||
ನಿರ್ಮತ್ಸರೋ ಯದಿಸಮುತ್ಧರಣಂ ವಿದಧ್ಯಾ |
ದಸ್ಯಾಹಮುಜ್ವಲಮತೇಶ್ಚರಣೌ ವಹಾಮಿ ||

ಸೂಕ್ಷ್ಮವಾಗಿ ವಿಚಾರಿಸಿ ನಾನು ಅಪ್ಪಯ್ಯದೀಕ್ಷಿತರ ಕೃತಿಯಲ್ಲಿ ದೋಷಗಳನ್ನು ತೋರಿಸಿಕೊಟ್ಟಿದ್ದೇನೆ. ಆ ದೋಷಗಳನ್ನು ಯಾರಾದರೂ ಉದ್ಧಾರ ಮಾಡಿದರೆ ಆ ಉಜ್ವಲಮತಿಯ ಪಾದಸಂವಹನವನ್ನು ನಾನು ಮಾಡುವೆನು.

ಇಲ್ಲಿ ಬಹುಜನ ವಿದ್ವಾಂಸರ ಮತಭೇದವುಂಟು ಕೆಲವರು ಪಂಡಿತರಾಜನ ದೋಷಗಳು ದುರದ್ಧರವಾದವುಗಳೆಂದೇ ಹೇಳುವರು. ಬೇರೆ ಕೆಲವರು ಅಪ್ಪಯ್ಯದೀಕ್ಷಿತ ರಲ್ಲಿರುವ ದ್ವೇಷಬುದ್ಧಿಯಿಂದ ಹೀಗೆ ಪಂಡಿತರಾಜನು ದೋಷೋದ್ಘಾಟನ ಮಾಡಿದ್ದಾನೆ, ಆ ದೋಷಗಳ ನಿರಾಕರಣ ಮಾಡುವದು ಶಕ್ಯವಾದುದೆಂದು ಹೇಳುವರು. ಅಚ್ಯುತರಾಯ ಮೋಡಕ ಎಂಬವರು ಪಂಡಿತರಾಯನಿಂದ ಕೊಡಲ್ಪಟ್ಟ ದೋಷಗಳ ಉದ್ಧಾರವನ್ನೂ ಮಾಡಿದ್ದಾರೆ. ಆ ವಿಚಾರವು ನಮಗೆ ಬೇಡ. ಪಂಡಿತರಾಜನೂ ನಮಗೆ ವಂದ್ಯನು; ದೀಕ್ಷಿತನೂ ಪೂಜ್ಯನು. ಮಾನನೀಯರಲ್ಲಿ ಕಟಾಕ್ಷವಿಕ್ಷೇಪವು ಬೇಡ.

ಅಸಫವಿಲಾಸ, ಜಗದಾಭರಣಕಾವ್ಯಗಳು ಸಾಂಪ್ರತ ಉಪಲಬ್ಧವಾಗಿಲ್ಲ.

## ರಸಗಂಗಾಧರ

ಇದು ಸಾಮಾನ್ಯವಾದ ಗ್ರಂಥವಲ್ಲ, ಪಂಡಿತರಾಜನ ಅಲೌಕಿಕ ಪಾಂಡಿತ್ಯವನ್ನು ವ್ಯಕ್ತಪಡಿಸುತ್ತವೆ ಕಿಂಬಹುನಾ ಅಲಂಕಾರಶಾಸ್ತ್ರರಹಸ್ಯಗಳ ಜನ್ಮಭೂಮಿಯೇ ಇದು ಈ ಗ್ರಂಥದಲ್ಲಿ ಪ್ರತಿಪಕ್ಷಿಗಳಲ್ಲಿ ಪಂಡಿತರಾಜನು ಅಪ್ರತಿಮವಾದ ಅನಾದರವನ್ನು ತೋರಿಸಿದ್ದಾನೆ. ಪಂಡಿತಮಂಡಲೀಸಾರ್ವಭೌಮನಾದ ಜಗನ್ನಾಥನಿಗೆ ಇದು ಶೋಭೆಯನ್ನೇ ಉಂಟುಮಾಡಿದೆ ಆದರೆ ಭಾರತವರ್ಷದ ದುರ್ಭಾಗ್ಯವೇ ಅಂತಹದುಂಟು, ಇಂತಹ ಪಂಡಿತರ ಅಪ್ರತಿಮವಾದ ಗ್ರಂಥಗಳೂ ಕೂಡ ಸಮಗ್ರವಾಗಿ ಸಿಕ್ಕುವದಿಲ್ಲ ಪಂಡಿತರಾಜನ ರಸಗಂಗಾಧರವಾದರೂ ಸಂಪೂರ್ಣವಾಗಿ ಉಪಲಬ್ಧವಾಗಿಲ್ಲ ವಿದ್ಯಮಾನ ಭಾಗದ ಕಡೆಯ ಪದ್ಯವೂ ಅಸಂಪೂರ್ಣವಾಗಿದೆ

"ಕಿಂ ಕುರ್ವತೇ ದರಿದ್ರಾಃ ಕಾ ಸಾರವತೀಧರಾ ಮನೋಜ್ಞತರಾ |
ಕೋ ಪಾವನಸ್ತ್ರಿಲೋಕ್ಯಾ .. ... .. . . .. . "

ಉಪಲಬ್ಧ ಭಾಗದಲ್ಲಿ ಆನನದ್ವಿತಯವು ಉಳಿರುವದು, ಪ್ರಥಮಾನನವು ಸಂಪೂರ್ಣವಾಗಿಯುಂಟು. ದ್ವಿತೀಯಾನನವು, ಅರ್ಧವೇ. ಕೆಲವರು ಅಪ್ಪಯ್ಯದೀಕ್ಷಿತರು ಚಿತ್ರ ಮೀಮಾಂಸೆಯನ್ನು ಅರ್ಧವಾಗಿಯೇ (ಅಪ್ಯರ್ಧಚಿತ್ರಮೀಮಾಂಸಾ ನ ಮುದೇ ಕಸ್ಯಮಾಂಸಲಾ) ಬರೆದಂತೆ ಪಂಡಿತರಾಜನೂ ರಸಗಂಗಾಧರವನ್ನು ಸ್ವೇಚ್ಛೆಯಿಂದಲೇ ಅರ್ಧವಾಗಿ ಬರೆದನೆಂದು ಹೇಳುತ್ತಿರುವರು ಹಾಗಾದರೆ ಕಡೆಯಲ್ಲಿ ಅಪ್ಪಯ್ಯದೀಕ್ಷಿತರಂತೆ ಅರ್ಧರಸಗಂಗಾಧರವು ಯಾರ ಸಂತೋಷಕ್ಕೋಸ್ಕರವಾಗಲಿಕ್ಕಿಲ್ಲವೆಂದು ಪಂಡಿತರಾಜನು ಯಾಕೆ ಹಾರೈಸಲಿಲ್ಲವೆಂದು ಇತರರು ಆಕ್ಷೇಪಿಸುವರು

ಈ ಗ್ರಂಥದ ಪ್ರಥಮಾನನದಲ್ಲಿ ಕಾವ್ಯರಸಾದಿ ನಿರೂಪಣವೂ ದ್ವಿತೀಯಾನನದಲ್ಲಿ ಧ್ವನಿಯ ಲಕ್ಷಣಗಳೂ ಅಲಂಕಾರಗಳ ಲಕ್ಷಣಗಳೂ ಹೇಳಲ್ಪಟ್ಟಿವೆ

ಈ ಗ್ರಂಥದ ಸಂಪೂರ್ಣ ಸ್ವರೂಪದ ಯಥಾರ್ಥ ಜ್ಞಾನವನ್ನು ಮಾಡಿಕೊಡುವದು ಈ ಚಿಕ್ಕ ಪುಸ್ತಕಕ್ಕೆ ಅಸಾಧ್ಯವೇ ಸರಿ. ಆದ್ದರಿಂದ ಇದರಲ್ಲಿಯ ಕೆಲವು ಸರಸ ಪದ್ಯಗಳನ್ನು ಉದಾಹರಿಸಿ ವಾಚಕರ ಮನಸ್ತುಷ್ಟಿಯನ್ನು ಮಾಡಲು ಯತ್ನಿಸುವೆವು. ಇಷ್ಟರಿಂದಲೇ ರಸಿಕ ವಾಚಕರು ತುಷ್ಟರಾಗದಿದ್ದರೆ ಮೂಲಗ್ರಂಥವನ್ನೇ ನೋಡಬೇಕೆಂದು ಪ್ರಾರ್ಥಿಸುವೆವು.

### ಈ ಗ್ರಂಥದ ಆದಿಮಪದ್ಯವು

ಸ್ಮೃತಾಪಿ ತರುಣಾತಪಂ ಕರುಣಯಾ ಹರಂತೀ ನೃಣಾ |
ಮಭಂಗುರತನುತ್ವಿಷಾಂ ವಲಯಿತಾ ಶತೈರ್ವಿದ್ಯುತಾಂ ||
ಕಲಿಂದಗಿರಿನಂದಿನೀತಟಸುರದ್ರುಮಾಲಂಬಿನೀ |
ಮದೀಯಮತಿಚುಂಬಿನೀ ಭವತು ಕಾಪಿಕಾದಂಬಿನೀ ||

ಈ ಶ್ಲೋಕದಲ್ಲಿ ಕವಿಯು ಶ್ರೀಕೃಷ್ಣಮೂರ್ತಿಯನ್ನು ಮೇಘಮಾಲೆಯೆಂದು ತಿಳಿದು ವರ್ಣಿಸಿದ್ದಾನೆ ಮೇಘಮಾಲೆಯು ಬಿಸಿಲಿನ ತಾಪವನ್ನು ಕಳೆಯುತ್ತದೆ. ಕೃಷ್ಣನ ಮೂರ್ತಿಯು ಸ್ಮರಣ ಮಾಡಿದ ಕೂಡಲೆ ಸಾಂಸಾರಿಕ ತಾಪವನ್ನು ಹೋಗಲಾಡಿಸುವದು ಮೇಘಮಾಲೆಯು ವಿದ್ಯುತ್ತಿನಿಂದ ವೇಷ್ಟಿತವಾಗಿರುವದು ಕೃಷ್ಣನ ಮೂರ್ತಿಯಂತೂ ನೂರಾರು ವಿದ್ಯುಲ್ಲತೆಯಂತ ಚಮಕಿಸುವ ಗೋಪಾಂಗನೆಯರಿಂದ ಸುತ್ತುಗಟ್ಟಲ್ಪಟ್ಟಿರುವದು ಈ ಗೋಪಸ್ತ್ರೀಯರ ಅಂಗಕಾಂತಿಯು ಭಂಗಶೀಲವಾದುದಲ್ಲ ಸಾರ್ವಕಾಲಿಕವಾದುದು ಕಲಿಂದ ಪರ್ವತದಿಂದ ಹುಟ್ಟಿ ಹರಿಯುವ ಯಮುನಾನದಿಯ ದಂಡೆಯ ಮೇಲಿರುವ ಕಡಾಲಮರಗಳ ಆಶ್ರಯವನ್ನು ತಾಳಿದ ಇಂತಹ ಈ ಶ್ರೀಕೃಷ್ಣ ಮೂರ್ತಿಯು ನಮ್ಮ ಬುದ್ಧಿಸ್ಥವಾಗಲಿ.

ಈ ಶ್ಲೋಕದಲ್ಲಿ ವ್ಯತಿರೇಕ-ರೂಪಕ ಅತಿಶಯೋಕ್ತ್ಯಲಂಕಾರಗಳ ಸಾಂಕರ್ಯವಿರುವದು

ಈ ಪದ್ಯದಲ್ಲಿರುವ ಪ್ರತಿಯೊಂದು ಪದಕ್ಕೆ ನಾಗೇಶಭಟ್ಟರು ಉತ್ಕೃಷ್ಟವಾದ ಸ್ವಾರಸ್ಯವನ್ನು ತೆಗೆದಿದ್ದಾರೆ ಕವಿಯು ಗ್ರಂಥಾರಂಭದಲ್ಲಿ ಈ ತೆರದಿ ಹಾರೈಸುತ್ತಾನೆ .

ನಿಮಗ್ನೇನ ಕ್ಲೇಶೈರ್ಮನನ ಜಲಧೇರಂತರುದರಂ ।
ಮಯೋನ್ನೀತೋ ಲೋಕೇ ಲಲಿತರಸಗಂಗಾಧರಮಣಿಃ ॥
ಹರನ್ನಂತರ್ಧ್ವಾಂತಂ ಹೃದಯಮಧಿರೂಢೋ ಗುಣವತಾಮ್ ।
ಅಲಂಕಾರಾನ್ ಸರ್ವಾನಪಿ ಗಲಿತಗರ್ವಾನ್ ರಚಯತು ॥

ಚಿಂತಾರೂಪ ಸಾಗರದಲ್ಲಿ ಬಹು ಪ್ರಯಾಸದಿಂದ ಮುಳುಗಿ ನಾನು ಈ 'ರಸಗಂಗಾಧರ'ವೆಂಬ ರತ್ನವನ್ನು ಹೊರಗೆ ತಂದಿಟ್ಟಿರುತ್ತೇನೆ ಅಂತಸ್ತಮಸ್ಸನ್ನು ಹೊಡೆದೋಡಿಸುವ ಈ ರತ್ನವು ಗುಣವಂತರ ಹೃದಯಸ್ಥಾನವನ್ನು ಅಲಂಕರಿಸಿ ಎಲ್ಲ ಆಭರಣಗಳ ಗರ್ವವನ್ನು ಹರಣ ಮಾಡಲಿ

ಗುಣವಂತರ ಎಂದು ಹೇಳಿರುವದರಿಂದ ಅಗುಣಜ್ಞರ ಅನಾದರವನ್ನು ಪಂಡಿತರಾಜನು ಗಣಿಸಲಿಲ್ಲವೆಂಬುದು ವ್ಯಕ್ತವಾಗುವದು

ಉಳಿದ ಅನೇಕ ಪಂಡಿತರು ಗ್ರಂಥಗಳನ್ನು ಬರೆದಿಟ್ಟಿರಲು ನೀನೇಕೆ ಬರೆಯುತ್ತಿ ? ಅದರಿಂದ ಪ್ರಯೋಜನವೇನು ? ಎಂದು ಕೇಳಿದರೆ ನಿಮಗೆ ಪಂಡಿತರಾಜನು ಉತ್ತರ ಕೊಡುತ್ತಾನೆ ನೋಡಿರಿ. "ಉಳಿದವರು ಗ್ರಂಥಗಳನ್ನು ಬರೆದರೆ ಬರೆಯಲಿ, ಅದರಿಂದ ನನ್ನ ಪರಿಶ್ರಮವು ಹೇಗೆ ನಿಷ್ಫಲವಾದೀತು ? ಆಮೇಲೆ ತಿಮಿಂಗಿಲಾದಿ ಮೀನಗಳು ಪ್ರತಿದಿವಸ ಸಾಗರದ ಸಂಕ್ಷೋಭವನ್ನು ಮಾಡಿದರೇನಾಯಿತು ? ಅದರಿಂದ ಮಂದರ ಪರ್ವತದ ಪರಿಶ್ರಮವು ನಿರರ್ಥಕವಾದುದೇ ? ಉಳಿದ ಪಂಡಿತರು ಪಂಡಿತರಾಜನ ಮುಂದೆ ಮೀನಗಳಾದರು ಇದೇ ಪುಣ್ಯವು.

ಪ್ರತಿದಿವಸ ಮೀನುಗಳು ಸಮುದ್ರವನ್ನು ಕಡೆಯುತ್ತಿರುವವು ಅದರಿಂದೇನು ಹೊರಟಿತು ? ಮಂದರಾಚಲವು ಕಡೆದದ್ದರಿಂದ ಹದಿನಾಲ್ಕು ರತ್ನಗಳು ಹೊರಟವು ದೇವತೆಗಳು ಸಂತುಷ್ಟರಾದರು

'ರಮಣೀಯಾರ್ಥಪ್ರತಿಪಾದಕಃ ಶಬ್ದಃ ಕಾವ್ಯಂ' ಎಂದು ಪಂಡಿತರಾಜನು ಕಾವ್ಯ ವ್ಯಾಖ್ಯೆಯನ್ನು ಮಾಡಿರುವನು ಪಂಡಿತರಾಜನ ಉತ್ತಮ ಕಾವ್ಯದ ಉದಾಹರಣವನ್ನು ನೋಡಿರಿ

ಶಯಿತಾ ಸವಿಧೇಪ್ಯನೀಶ್ವರಾ ।
ಸಫಲೀಕರ್ತುಮಹೋಮನೋರಥಾನ್ ॥
ದಯಿತಾ ದಯಿತಾನನಾಂಬುಜಂ ।
ದರಮೀಲನ್ನಯನಾ ನಿರೀಕ್ಷತೇ ॥

ಪಂಡಿತರಾಜನ ಶ್ಲೋಕದಲ್ಲಿರುವ ಮಧುರಭಾವವನ್ನು ನಮ್ಮ ಶಬ್ದಗಳಿಂದ ಯಥಾರ್ಥವಾಗಿ ರೇಖಿಸುವದು ಅಸಾಧ್ಯವು. ಆದರೂ ತಕ್ಕಮಟ್ಟಿಗೆ ಉಲ್ಲೇಖಿಸುವೆವು ವಲ್ಲಭನ ಹತ್ತರವೇ ಮಲಗಿಕೊಂಡರೂ ಪ್ರಣಯಿನಿಯು ತನ್ನ ಮನೋರಥವನ್ನು ಪೂರ್ಣ ಮಾಡಿಕೊಳ್ಳಲು ಸಮರ್ಥಳಾಗಲಿಲ್ಲ. ಸ್ವಲ್ಪ ಕಣ್ಣು ತೆರೆದು ಆ ವಲ್ಲಭನ ಮುಖಾಂಬುಜವನ್ನು ನೋಡುತ್ತಾಳೆ

ಸ್ತ್ರೀಯರಿಗೆ ಪುರುಷಮುಖಾವಲೋಕನಾದಿಗಳಿಂದ, ಪುರುಷರಿಗೆ ಪ್ರತಿಜ್ಞಾಭಂಗ ಪರಾಭವಾದಿಗಳಿಂದ ಪೀಡೆಯು ಜನಿಸುವದು ಅದು ಒಂದು ಮನೋವೃತ್ತಿ ವಿಶೇಷವು. ವೈವರ್ಣ್ಯಅಧೋಮುಖತ್ವಾದಿ ಕಾರಣೀಭೂತವಾದುದು ಎಂದು ಲಜ್ಜೆಯ ವಿವರವನ್ನು ಹೇಳಿ ಅದಕ್ಕೆ ಪಂಡಿತರಾಜನು ಉದಾಹರಣೆ ಕೊಡುತ್ತಾನೆ ·

ಕುಚಕಲಶಯುಗಾಂತರ್ಮಾಮಕೀನಂ ನಖಾಂಕಂ ।
ಸಪುಲಕತನುಮಂದಂ ಮಂದಮಾಲೋಕಯಂತೀ ॥
ವಿನಿಹಿತವದನಂ ಮಾಂ ವೀಕ್ಷ್ಯಬಾಲಾ ಗವಾಕ್ಷೇ ।
ಚಕಿತನತನತಾಂಗೀ ಸದ್ಮಸಧ್ಯೋ ವಿವೇಶ ॥

ಗಂಡನು ತನ್ನ ಹೆಂಡತಿಯ ಸ್ಥಿತಿಯನ್ನು ವರ್ಣಿಸುತ್ತಾನೆ ಕುಚಗಳಲ್ಲಿ ತನ್ನ ಚಿಹ್ನಗಳನ್ನು ಆಕೆಯು ಮೆಲ್ಲಮೆಲ್ಲನೆ ನೋಡುತ್ತ ನಿಂತಿದ್ದಳು. ಅಷ್ಟರಲ್ಲಿ ನಾನು ಕಿಡಕಿಯಲ್ಲಿ ಹಣಿಕಿಹಾಕಿ ನೋಡಿದೆನು. ನನ್ನನ್ನು ನೋಡಿದ ಮೇಲೆ ಬಾಲೆಯು ಚಕಿತ ಚಕಿತಳಾಗಿ ಹುದುಗಿಕೊಂಡು ಮನೆಯಲ್ಲಿ ತತ್ಕಾಲಕ್ಕೆ ಸೇರಿದಳು.

ಅಪ್ಪಯ್ಯ ದೀಕ್ಷಿತರ ಸಮಾಚಾರವನ್ನು ಜಗನ್ನಾಥನು ರಸಗಂಗಾಧರದಲ್ಲಿ ಮೇಲಿಂದ ಮೇಲೆ ತೆಗೆದುಕೊಂಡಿದ್ದಾನೆ ಒಮ್ಮೆ ಅವರಿಗೆ 'ದ್ರವಿಡಶಿಶು' ಎನ್ನುತ್ತಾನೆ.

ಒಮ್ಮೆ 'ಆಯುಷ್ಯವಂತನೆ'ಂದು ಅನ್ನುತ್ತಾನೆ ಮೇಲಿಂದ ಮೇಲೆ ಅವರ ಮತವನ್ನು ಖಂಡಿಸಿದ್ದಾನೆ

ಪಂಡಿತರಾಜನ ಅರ್ಥಾಲಂಕಾರಗಳ ವಿವೇಚನವನ್ನು ನೋಡಿದರೆ ಅಹೋ ಪಂಡಿತರಾಜನ ಪಾಂಡಿತ್ಯವಂತಹದು, ಎಂದು ಮನಸ್ಸು ಧಕ್ಕಾಗಿ ಹೋಗುವದು ಅಪಹ್ನುತ್ಯಲಂಕಾರಕ್ಕೆ ಉದಾಹರಣವು

ಇದು ಸುಂದರಿಯ ಮುಖವಲ್ಲ, ಸುವಾಸನೆಯನ್ನು ಬೀರುವ ಕಮಲವು, ಇದು ನಗೆಯಲ್ಲ, ಸಹಜಮನೋಹರವಾದ ವಿಕಾಸವು ಇವು ಸ್ತನಗಳಲ್ಲ, ಬಂಗಾರ ಬಣ್ಣದ ಹಣ್ಣುಗಳು ಭ್ರಮರಗಳಿಂದ ಸುತ್ತುಗಟ್ಟಲ್ಪಟ್ಟ ಲತೆಯೇ ಇದಲ್ಲದೆ ಇವಳು ರಮಣಿಯಲ್ಲ

ಶೃಂಖಲಾಮೂಲಕವಾದ ಅಲಂಕಾರಗಳಲ್ಲಿ ಒಂದಾದ ಕಾರಣಮಾಲೆಯ ಉದಾಹರಣವನ್ನು ನೋಡಿರಿ

ಲಭ್ಯೇತ ಪುಣ್ಯೈರ್ಗೃಹಿಣೀ ಮನೋಜ್ಞಾ |
ತಯಾ ಸುಪುತ್ರಾಃ ಪರಿತಃ ಪವಿತ್ರಾಃ ||
ಸ್ಫೀತಂ ಯಶಸ್ತೈಃ ಸಮುದೇತಿ ನೂನಂ |
ತೇನಾಸ್ಯ ನಿತ್ಯಃ ಖಲು ನಾಕಲೋಕಃ ||

ಪುಣ್ಯವಿದ್ದರೆ ಉತ್ತಮ ಹೆಂಡತಿಯು ಸಿಗುತ್ತಾಳ, ಆಕೆಯಿಂದ ಪವಿತ್ರವಾದ ಮಕ್ಕಳು ಹುಟ್ಟುತ್ತಾರೆ ಅದರಿಂದ ಸಮೃದ್ಧವಾದ ಯಶಸ್ಸು ಹುಟ್ಟುವದು ಇಷ್ಟೆಲ್ಲ ಆದರ ಇದೇ ನಿತ್ಯವಾದ ಸ್ವರ್ಗಲೋಕವಲ್ಲವೇ ?

ಈ ಗ್ರಂಥದಲ್ಲಿ ಜಗನ್ನಾಥನಿಂದ ಅನಾದರವನ್ನು ಹೊಂದದಿದ್ದ ಪ್ರಾಚೀನ ಪಂಡಿತನಾಗಲಿ ಅವನ ಸಮಾನಕಾಲಿಕನಾಗಲಿ ಒಬ್ಬನೂ ಆಲಂಕಾರಿಕನು ಇಲ್ಲ ಎಲ್ಲರಿಗೂ ಪಂಡಿತರಾಜನು ಅಲ್ಪಸ್ವಲ್ಪ ದಕ್ಷಿಣೆ ಮುಟ್ಟಿಸಿದ್ದಾನೆ ರಸಗಂಗಾಧರವು ಪಂಡಿತರಿಗೇ ಉಪಯುಕ್ತವಾದುದು ಸುಖದಿಂದ ಅಲಂಕಾರಶಾಸ್ತ್ರದ ರಹಸ್ಯಗಳನ್ನು ತಿಳಿದುಕೊಳ್ಳಲು ಇಚ್ಛಿಸುವ ವಿದ್ಯಾರ್ಥಿಗಳಿಗೆ ಅಕಿಂಚಿತ್ಕರವಾದುದೇ

ಸಮಾಪ್ತ

# ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

## ೧೫ ಪುಷ್ಪಗಳ ಪ್ರಕಟಣೆ

| | | |
|---|---|---|
| ೧ | ಪಂಡಿತರಾಜ ಜಗನ್ನಾಥ | ೫-೦೦ |
| ೨ | ಕನ್ನಡಿಗರ ಜನ್ಮಸಾರ್ಥಕತೆ | ೫-೦೦ |
| ೩ | ಕರ್ಣಾಟಕ ನರಕಾಸುರ ವಿಜಯ ವ್ಯಾಯೋಗಂ | ೪-೦೦ |
| ೪ | ಕರ್ನಾಟಕ ಕಥಾಸರಿತ್ಸಾಗರ | ೬-೦೦ |
| ೫ | ಶೌರ್ಯಸಾಗರ | ೬-೦೦ |
| ೬ | ಕನ್ನಡಮಾತು ತಲೆಯೆತ್ತುವ ಬಗೆ | ೩-೦೦ |
| ೭ | ಕಾಲಿದಾಸ ಚರಿತ್ರ | ೬-೦೦ |
| ೮ | ~~ಕರ್ಣಾಟಕ ಯಯಾತಿ ನಾಟಕಂ~~ | ೮-೦೦ |
| ೯ | ಮೋಹಿನೀ ಅಥವಾ ನಿಂದಕರ ನಡವಳಿ | ೧೦-೦೦ |
| ೧೦ | ಭಾರತೀಯ ವಿದುಷಿಯರು | ೮-೦೦ |
| ೧೧ | ಶ್ರೇಯಃಸಾಧನ | ೮-೦೦ |
| ೧೨ | ಗೃಹವೈದ್ಯಕವು | ೮-೦೦ |
| ೧೩ | ಈಸೋಪನ ಚರಿತ್ರ | ೩-೦೦ |
| ೧೪ | ವಿದ್ಯಾರಣ್ಯ ಸ್ವಾಮಿಗಳು | ೧೦-೦೦ |
| ೧೫ | ನರಗುಂದದ ಬಂಡಾಯ | ೧೦-೦೦ |

